

15–12–2018 ರಂದ್ ಮಡಿಕೇರಿಲಿ ನಡ್ದ ಅಕಾಡೆಮಿಯ 7ನೇ ವಾರ್ಷಿಕೋತ್ಸವ, ಭಾಷಾ ಸೌಹಾರ್ದ ಜಂಬರ ಮತ್ತೆ ವರ್ಗಾವಣೆ ಆದ ಅಕಾಡೆಮಿನ ರಿಜಿಸ್ಟ್ರಾರ್ ಶ್ರೀ ಉಮರಬ್ಬನವುಕೆ ಗೌರವ ಸಮರ್ಪಣೆ ಮಾಡ್ತಿರ್ದು




ಅರೆಭಾಷೆ ಅಕಾಡೆಮಿ ಪ್ರಕಟಿಸಿದ ಪುಸ್ತಕಗಳ್ನ ಎಸ್.ಎಸ್. ಪದವಿ ಪೂರ್ವ ಕಾಲೇಜು, ಸುಬ್ರಮಣ್ಯ ಇಲ್ಲಿಗೆ ಅಕಾಡೆಮಿ ಸದಸ್ಯರಾದ ದಿನೇಶ ಹಾಲೆಮಜಲ್‌ನವು ಉಚಿತ ಆಗಿ ಕೊಡ್ತಿರ್ದು

**"HINGARA"** A quarterly on Arebashe Language, Litereature and Culture, Published by 'Karnataka Arebashe Samskruthi Mathu Sahithya Academy' Madikeri - 571201

**ಪ್ರಕಟಣೆ : ಅಕ್ಟೋಬರ್–ನವಂಬರ್–ಡಿಸಂಬರ್ – 2018**

**ಪುಟಗಳು : 92**
**ಬೆಲೆ : ರೂ. 20/–**



**ಪ್ರಕಟಣೆ :**
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,**
'ಕಾಫಿ ಕೃಪಾ' ಕಟ್ಟಡ, 1ನೇ ಮಹಡಿ, ರಾಜಾಸೀಟ್ ರಸ್ತೆ,
ಮಡಿಕೇರಿ, ಕೊಡಗು ಜಿಲ್ಲೆ.

**ಪುಸ್ತಕ ಸಿಗುವ ಸ್ಥಳ :**
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,**
'ಕಾಫಿ ಕೃಪಾ' ಕಟ್ಟಡ, 1ನೇ ಮಹಡಿ, ರಾಜಾಸೀಟ್ ರಸ್ತೆ,
ಮಡಿಕೇರಿ, ಕೊಡಗು ಜಿಲ್ಲೆ.
ದೂರವಾಣಿ ಸಂಖ್ಯೆ : 08272–223055

ಮುದ್ರಕರು:
ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,
ಪೂಜಾ ಆರ್ಕೇಡ್,
ಜೂನಿಯರ್ ಕಾಲೇಜ್ ರಸ್ತೆ, ಮಡಿಕೇರಿ.
Ph. 08272-224919, 9448135592

# ಹಿಂಗಾರ

ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

ಪ್ರಧಾನ ಸಂಪಾದಕರ್

**ಪಿ.ಸಿ. ಜಯರಾಮ**

ಸಂಪಾದಕರ್

**ಬಾರಿಯಂಡ ಜೋಯಪ್ಪ**

ಪ್ರಕಾಶಕರ್

**ಚಂದ್ರಹಾಸ ರೈ ಬಿ.**

# ಅಧ್ಯಕ್ಷರ ಮಾತ್

ಎಲ್ಲವೂಕ್ಕೂ ಹೊಸ ವರ್ಷದ ಶುಭಾಶಯಗ. ಹೊಸ ವರ್ಷ ಎಲ್ಲರ ಬಾಳ್‌ಲಿ ಸುಖ ಸಂತೋಷ, ಸಮೃದ್ಧಿ ತರಲಿ. ಬಾಳ್ ಬಂಗಾರವಾಗಲಿ.

2018ನೇ ಸೆಪ್ಟೆಂಬರ್ 15 ರಿಂದ ಸುಳ್ಯದ ಬೆಳ್ಳಾರೆಲಿ ಶಾಲಾ ಮಕ್ಕಳಿಗೆ ಅರೆಬಾಸೆ ಯಕ್ಷಗಾನ ತರಬೇತಿ ನಡೆತಾ ಉಟ್ಟು. ಸುಮಾರು 50 ಮಕ್ಕ ತರಬೇತಿ ಪಡೆತಾ ಒಳೊ. ಪ್ರದರ್ಶನ ಕೊಡಿಕೂ ತಯಾರಾಗಿ ಒಳ.

ದಶಂಬರ ತಿಂಗಳ 15 ಅರೆಬಾಸೆ ಅಕಾಡೆಮಿ ಸ್ಥಾಪನೆ ಆದ ದಿನವೂ ಹೌದು. ನಮ್ಮ ತಂಡನ ಸರಕಾರ ನಾಮಕರಣ ಮಾಡ್ದ ದಿನವೂ ಹೌದು. ಆ ದಿನ ನಾವು ಮಡಿಕೇರಿಲಿ "ಅರೆಬಾಸೆ ಸೌಹಾರ್ದ"ಂತೇಳುವ ಕಾರ್ಯಕ್ರಮನ ಆಚರಿಸಿದ ಆ ಕಾರ್ಯಕ್ರಮಲಿ ಸುಮಾರ್ ಮೂರು ವರ್ಷಂದ ರಿಜಿಸ್ಟ್ರಾರ್ ಆಗಿ ಭಾರೀ ಒಳ್ಳೆ ಕೆಲಸ ಮಾಡ್ದ ಉಮ್ಮರಬ್ಬನವುಕೆ ವರ್ಗಾವಣೆ ಆದ ಪ್ರಯುಕ್ತ ಸನ್ಮಾನ ಮಾಡ್ಡೊ. ಈಗ ಅಕಾಡೆಮಿನ ಹೊಸ ರಿಜಿಸ್ಟ್ರಾರ್ ಆಗಿ ಚಂದ್ರಹಾಸ ರೈ ಬಿ. ನವು ಬಂದಳೊ. ಅವು ಅಕಾಡೆಮಿನ ಕೆಲಸಲಿ ಮುತುವರ್ಜಿ ವಹಿಸಿ ಕೆಲಸ ಮಾಡುವೆ.

2019ರ ಜನವರಿ 5ನೇ ತಾರೀಕಿಗೆ ಸುಳ್ಯದ ಜಾಲ್ಸೂರ್‌ಲಿ ಅರೆಬಾಸೆ ವಿಚಾರ ಸಂಕಿರಣ, ಕವಿಗೋಷ್ಠಿ ಮತ್ತೆ ಸಾಂಸ್ಕೃತಿಕ ಗೌಜಿ ನಡ್ದದೆ. ಅದರೊಟ್ಟಿಗೆ ಅರೆಬಾಸೆ ಮಾತಾಡುವ, ವಿವಿಧ ಕ್ಷೇತ್ರಲಿ ಒಳ್ಳೇ ಕೆಲ್ಸ ಮಾಡ್ದವುಕೆ ಸನ್ಮಾನ ಮಾಡುವ ಕಾರ್ಯಕ್ರಮ ಉಟ್ಟು. ಅದರೊಟ್ಟಿಗೆ ನಾವೇ ತರಬೇತಿಗೊಳ್ಸಿದ ಅರೆಬಾಸೆ ಯಕ್ಷಗಾನ "ಶಿಶುಪಾಲ ವಧೆ" ಪ್ರದರ್ಶನ ನಡ್ದದೆ.

2019ರ ಜನವರಿ 20ನೇ ತಾರೀಕಿಗೆ ಸುಳ್ಯದ ಕೊಲ್ಲಮೊಗ್ರಲಿ ಪುಸ್ತಕ ಬಿಡುಗಡೆ ಕಾರ್ಯಕ್ರಮ, ಪುಸ್ತಕ ಬರ್ದವುಕೆ ಪ್ರೋತ್ಸಾಹ ಕೊಡುವ ಕಾರ್ಯಕ್ರಮ ನಡ್ದದೆ. ಅದರೊಟ್ಟಿಗೆ ವಿಚಾರಗೋಷ್ಠಿ, ಸಾಂಸ್ಕೃತಿಕ ಸ್ಪರ್ಧೆ ಮತ್ತೆ ನಾಟಕ ಪ್ರದರ್ಶನ ನಡ್ದದೆ.

ಮುಂದಿನ ತಿಂಗಳ್‌ಲಿ ಪುತ್ತೂರ್‌ಲಿ 2018ರ "ಪ್ರಶಸ್ತಿ ಪ್ರದಾನ" ಕಾರ್ಯಕ್ರಮ ನಡ್ದದೆ. ಸುಳ್ಯಲಿ ಅರೆಬಾಸೆ ಸಾಹಿತ್ಯ ಸಮ್ಮೇಳನ ಮಾಡಿಕೆ ತಯಾರ್ ಮಾಡ್ತ ಒಳೊ. ಫೆಲೋಶಿಪ್‌ಗಾಗಿ ಆಯ್ಕೆ ಮಾಡುವೆ. ಅರೆಬಾಸೆ ವಿಚಾರ ಸಂಕಿರಣ ಕಾರ್ಯಕ್ರಮ ಮಾಡೊಕು ಅಂತ ಒಳ.

ಅರೆಬಾಸೆ ಕಾರ್ಯಕ್ರಮ ನಡೆವಲ್ಲಿಗೆ ನೀವೆಲ್ಲ ಬನ್ನಿ. ಬಾಸೆನ ಬೆಳ್ಸಿಕೆ, ಉಳ್ಸಿಕೆ ಸಹಕಾರ ನೀಡಿ ಅಂತ ನಿಮ್ಮೊಟ್ಟಿಗೆ ಕೇಳಿಕಂಡನೆ. ನಮಸ್ಕಾರಗ.

**✍ ಪಿ.ಸಿ. ಜಯರಾಮ**

# ಸಂಪಾದಕೀಯ

ಕೊಡಗ್‌ನ ಇತಿಹಾಸಲಿ 2018ರ ವರ್ಷ ಮಹಾ ಮಳೆಂದಾಗಿ ಮಹಾ ದುರಂತದ ವರ್ಷಾತ ದಾಖಲಾತ್. ಆ ಘಟನೆಗೆ ವಿಷಾದ ಹೇಳನೊ. ಕಷ್ಟಲಿರವು ಬೇಗ ಹೊಸ ಬದ್ಕ್‌ಗೆ ಬರಲಿತ ಹಾರೈಸನೊ.

ಕಾವೇರಿ ಜಾತ್ರೆ, ದಸರಾ, ದೀಪಾವಳಿ, ಹುತ್ರಿ ಹಬ್ಬ ಎಲ್ಲಾ ಕಳ್ತ್. ಈ ಸತಿ ಪಿಟಾಕಿ ಸದ್ದ್ ಎಲ್ಲೋ ಅಲ್ಲೊಂದ್ ಇಲ್ಲೊಂದ್ ಇತ್ತಷ್ಟೆ. ಎಲ್ಲಾ ಆಚರಣೆಗ ಸರಳ ಆಗಿತ್ತ್. ಮೋಡ, ಗಾಳಿ, ಮಳೆನ ಗ್ಯಾನ ಮಾಡಿರೆ ಯಾವ ಆಚರಣೆಗಳೂ ಬೇಡಪ್ಪಾತ್ತೇಳುವಂಗೆ ಜನ ಬೇಜಾರ್‌ಪಟ್ಟೊಳೊ.

15–12–2018 ರಂದ್ ಮಡಿಕೇರಿಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಏಳನೇ ವರ್ಷದ ವರ್ಷಾಚರಣೆನ ಅರೆಭಾಷೆ ಸೌಹಾರ್ದ ದಿನಾಚರಣೆತ ಆಚರಿಸಲಾತ್. ಎಲ್ಲಾ ಗೌಡ ಸಮಾಜಗಳ ಅಧ್ಯಕ್ಷರ್ ಮತ್ತೆ ಕಾರ್ಯದರ್ಶಿಗಳ ಒಂದ್ ಕೂಡು ಕೂಟದ ಜಂಬರ ಆಗಲಿತ್ತೇಳುವ ಆಸೆಂದ ಆ ಕಾರ್ಯಕ್ರಮನ ರೂಪಿಸಲಾಗಿತ್ತ್.

ಇದೀಗ ಅಕ್ಟೋಬರ್, ನವೆಂಬರ್ ಮತ್ತೆ ಡಿಸಂಬರ್ 2018ರ 'ಹಿಂಗಾರ' ನಿಮ್ಮ ಕೈಲಿ ಉಟ್ಟು. ಈ ಸಂಚಿಕೆಲಿ ಕಾವೇರಿ ಮನೆ ಡಾ। ಬೋಜಪ್ಪನವರ ಕುರ್ತ್ ಪರಿಚಯ ಲೇಖನ ಪ್ರಕಟ ಆಗುಟು. ಅಷ್ಟೇ ಅಲ್ಲದೆ ಪ್ರವಾಸ ಲೇಖನ ಹೊಸ ಸೇರ್ಪಡೆ. ಮತ್ತೆ ಎಂದ್‌ನಂಗೆ ಕತೆ, ಕವನ, ಲೇಖನ, ಹೊಸರುಚಿ, ಮನೆ ಮದ್ದ್ ಬರವಣಿಗೆ ಉಟ್ಟು.

ಹಿಂದೆನ ರಿಜಿಸ್ಟ್ರಾರ್ ಆಗಿದ್ದ ಶ್ರೀ ಉಮರಬ್ಬನವ್ಕೆ ಶುಭಾಶಯಗ. ಈಗನ ರಿಜಿಸ್ಟ್ರಾರ್ ಆಗಿ ಬಂದಿರುವ ಶ್ರೀ ಚಂದ್ರಹಾಸ ರೈ ಬಿ. ನವುಕೆ ಸ್ವಾಗತ.

ಸಕಾಲಲಿ ಸಾಹಿತ್ಯ ಒದಗಿಸಿ ಕೊಟ್ಟ ಎಲ್ಲಾ ಬರಹಗಾರರಿಗೆ ಧನ್ಯವಾದಗ.

ನೀವ್ಗೆಲ್ಲವ್ಕೂ 2019ರ ವಸಂತದ ಶುಭಾಶಯಗ.

ಃಬಾರಿಯಂಡ ಜೋಯಪ್ಪ.

31–12–2018

# ಹಿಂಗಾರ ಒಡ್ಸ್‌ಕನ

ಹಿಂಗಾರದ ವಿವರ

'ಹಿಂಗಾರ'ಲಿ ಪ್ರಕಟ ಆದ ಬರಹಗಳಿಗೆ
ಆಯಾ ಬರಹಗಾರರೆ ಜವಾಬ್ದಾರರ್.

# ಅರೆಬಾಸೆ ಗೀತೆ

ಓಂ, ಆಗಲಿ ಜಯ, ಆಗಲಿ ಜಯ
ಅರೆಬಾಸೆಗೆ, ನಮ್ಮ ತಾಯಿನುಡಿಗೆ ॥

ನೀ ನೆಲ್ಸಿದ ನೆಲ ವನರಾಶಿನ ಮೈಸಿರಿ
ನಿನ್ನಲುದಿತದ ಜಲ ಪುಣ್ಯತೀರ್ಥ ।
ಫಲ ಕೊಡುವ ತೋಟಗ, ಪಯಿರ್‌ಪಚ್ಚೆನ ಹೊಲಗದ್ದೆಗ
ಎತ್ತ ನೋಡಿರೂ ಕಣ್‌ತಣ್ಸುವ ಸಾಲ್‌ಗಿರಿಗ ॥

ವೀರ ಯೋಧರ ನಾಡ್ ಕೀರ್ತಿ ಸಂಪದ ಬೀಡ್
ಮಳೆ ಬಿಸ್‌ಲ್‌ಗೆ ದುಡಿವ ರೈತ ಯೋಗಿಗಳ ಗೂಡ್।
ಸೌಜನ್ಯಶೀಲರ್ ನಾವು, ಅತಿಥಿ ಸತ್ಕಾರಲಿ ದಣಿಯದಿರೊವು
ಗುರು ಹಿರಿಯರ್‌ಗೆ ನಮಿಸಿ ತಲೆ ಬಾಗೊವು ॥

ಜಾತಿ ಮತ ಅಂಧತೆನ ತಿರಸ್ಕರ್‌ಸೊವು ನಾವು
ಮೇಲ್ಕೀಳ್ ಭಾವನೆನ ಹೊರ ದೂಡೊವು ।
ಸಾಹಿತ್ಯ ಸಂಸ್ಕೃತಿ ವಿಜ್ಞಾನ ಪಥ ಹಿಡ್ದ್
ಸರ್ವತ್ರ ಸಾಧನೆಗೆ ಪಣ ತೊಟ್ಟೊವು ॥

ಆಗಲಿ ಜಯ, ಆಗಲಿ ಜಯ ಅರೆಭಾಷೆಗೆ
ನಮ್ಮ ಬಾಳ್‌ನ ಉಸ್‌ರ್ ತಾಯಿ ನುಡಿಗೆ ॥

✍ಮಾವಜಿ ರಾಮಣ್ಣ ಅಚ್ಯುತ

ವ್ಯಕ್ತಿ ಪರಿಚಯ



# ಪ್ರತಿಭಾವಂತ ಕಾವೇರಿ ಮನೆ
## ಡಾ। ಬೋಜಪ್ಪ

ಶ್ರೀ ಬೋಜಪ್ಪನವು ಕಾವೇರಿ ಮನೆ ಶ್ರೀ ಮುತ್ತಣ್ಣ ಬೆಳ್ಯವ್ವ ದಂಪತಿಗಳ ಮಂಜನಾಗಿ 10-05-1930 ರ್‌ಲಿ ಹುಟ್ಟಿದೊ. ಶ್ರೀಯುತರ ಹುಟ್ಟೂರು ಮಡಿಕೇರಿ ತಾಲೂಕು ಭಾಗಮಂಡಲ ನಾಡ್‌ನ ಸಣ್ಣ ಪುಲಿಕೋಟು ಗ್ರಾಮ. ಅವ್ವನ ತವುರು ಮನೆ ತಾವೂರು ಗ್ರಾಮದ ಕೋಳಿಬೈಲು. ಬೋಜಪ್ಪನವುಕೆ ಇಬ್ಬರ್ ಅಣ್ಣಂದರ್, ಒಬ್ಬಳು ಅಕ್ಕ ಮತ್ತೆ ಒಬ್ಬ ತಮ್ಮ. ಇಂದ್ ಅವು ಯಾರೂ ಇಲ್ಲೆ.

ಶ್ರೀಯುತರ್ ಕೋರಂಗಾಲ ಇಸ್ಕೂಲ್‌ಲಿ ಪ್ರಾಥಮಿಕ ವಿದ್ಯೆನ ಪಡ್ದ್ ಭಾಗಮಂಡಲ ಇಸ್ಕೂಲ್‌ಲಿ ಮಾಧ್ಯಮಿಕ ವಿದ್ಯೆನ ಪಡ್ದೊ. 1947-48ರ್‌ಲಿ ಮಡಿಕೇರಿನ ಸೆಂಟ್ರಲ್ ಹೈಸ್ಕೂಲ್‌ತ್ತೇಳಿರೆ ಈಗನ ಜೂನಿಯರ್ ಕಾಲೇಜ್‌ಲಿ ಎಸ್.ಎಸ್.ಎಲ್.ಸಿ ಪಾಸಾಗಿ 1948-50 ರ್‌ಲಿ ಜೂನಿಯರ್ ಮತ್ತೆ ಸೀನಿಯರ್ ಇಂಟರ್‌ಮಿಡಿಯಟ್ ಮುಗ್ಸಿದೊ. ಧಾರವಾಡದ ಎಗ್ರಿಕಲ್ಚರಲ್ ಕಾಲೇಜ್‌ಲಿ 1950-1954ರ್‌ಲಿ ಬಿ.ಎಸ್‌ಸಿ; ಎಗ್ರಿ-ಆನರ್ಸ್ ಪದವಿ ಪಡ್ಕಂಡ ಪ್ರತಿಭಾವಂತ.

ರೈತ ಕುಟುಂಬಲಿ ಹುಟ್ಟಿದ ಬೋಜಪ್ಪನವ್ಕೆ ಒಬ್ಬ ವಿಜ್ಞಾನಿ ಆಕುತ್ತೇಳುವ ಆಸೆ ಇತ್ತ್. ಆ ಆಸೆಗೆ ಒತ್ತಾಸೆ ಕೊಟ್ಟವು ಅವರ ಬಾವ ಕೋಳಿಬೈಲು ಮುತ್ತಪ್ಪನವು. ಅಲ್ಲದೆ ಅಂದ್ 'ಸಿ' ಸ್ಟೇಟ್ ಆಗಿದ್ದ ಕೊಡಗ್‌ಲಿ ಡಿಸ್ಟ್ರಿಕ್ಟ್ ಜಡ್ಜ್ ಆಗಿದ್ದ ನಿಡ್ಯಮಲೆ ಮುದ್ದಪ್ಪನವು, ವಕೀಲ ಹಾಗೂ ಲೋಕಸಭಾ ಸದಸ್ಯರಾಗಿದ್ದ ನಿಡ್ಯಮಲೆ ಸೋಮಣ್ಣನವು ಮತ್ತೆ ಡೆಪ್ಯೂಟಿ ಸ್ಪೀಕರ್ ಆಗಿದ್ದ ಕೋರನ ದೇವಯ್ಯನವು. ಅವೆಲ್ಲರ್ನ ಬೋಜಪ್ಪನವು ತಮ್ಮ ಈ ಇಳಿ ವಯಸ್‌ಲೂ ಗ್ಯಾನ ಮಾಡಿಕಂಡ್ ಗೌರವ ಸೂಚಿಸಿವೆ.

ಬಿ.ಯಸ್ಸಿ; ಎಗ್ರಿ ಆದಂಗೆ ಕೂಡಿಗೆ ಫಾರಂಲಿ ಸುರೂನ ವೃತ್ತಿಗೆ ಅಡಿ ಇಸಿದೊ. ಮತ್ತೆ ವಿರಾಜಪೇಟೆಲಿ **ಎಗ್ರಿಕಲ್ಚರಲ್ ಡೆಮಾನ್‌ಸ್ಟ್ರೇಟರ್** ಆಗಿ ನೇಮಕ

ಆದವೆ.

1956ರ್‌ಲಿ ಆಗಸ್ಟ್‌ಲಿ ಐ.ಸಿ.ಎ.ಆರ್. ನ್ಯೂ–ಡೆಲ್ಲಿ ದೇಶಲಿ ಕಿತ್ತುಳಿ ತೋಟಗಳಿಗೆ ಹರಡಿದ್ದ ವಿಶೇಷ ತರದ ಕಾಯಿಲೆಗಳ ಹತೋಟಿಗೆ ಸಂಶೋಧನೆ ನಡ್ಸಿಕೆ ಸುರುಮಾಡ್ದ ಗೋಣಿಕೊಪ್ಪದ ಯೋಜನೆಲಿ ಆಯ್ಕೆ ಆಗಿ ಬೇರೆ ಬೇರೆ ಕ್ಷೇತ್ರಗಳ್‌ಲಿ 1969ರ ಮುಟ್ಟ ಸಂಶೋಧನೆ ಮಾಡಿ ಹಲವಾರ್ ರೋಗಗಳ ನಿವಾರಣೆ ಮಾಡ್ದರ್‌ಲಿ ಯಶಸ್ವಿಯಾದೊ.

ಸಂಶೋಧನೆ ಬಗ್ಗೆ ಬೋಜಪ್ಪನವರ್‌ಲಿ ಹೆಚ್ಚಿನ ಆಸಕ್ತಿ ಇರುದರ ನೋಡ್ದ ಕರ್ನಾಟಕ ಸರಕಾರ ಇವರ್ನ ನ್ಯೂಡೆಲ್ಲಿಯ ಐ.ಎ.ಆರ್.ಐ. ಗೆ ಹೆಚ್ಚಿನ ವ್ಯಾಸಂಗಕ್ಕೆತ್ತೇಳಿ ಆಯ್ಕೆ ಮಾಡಿ ಕಳ್ಸಿತ್. 1969–72ರ ಅವಧಿಲಿ ಎಮ್.ಎಸ್ಸಿ., ಮತ್ತೆ ಪಿ.ಹೆಚ್‌ಡಿ. ಪದವಿ ಪಡ್ದ್ 1972ರ್‌ಲಿ ಬೆಂಗಳೂರ್ ಲಾಲ್‌ಬಾಗ್‌ನ ತೋಟಗಾರಿಕೆ ಇಲಾಕೆಲಿ ಡೆಪ್ಯೂಟಿ ಡೈರೆಕ್ಟರ್ ಆಗಿ ನೇಮಕ ಆದೊ.

**ಕೊಡಗ್‌ನ ಇಡೀ ಗೌಡ ಜನಾಂಗಕ್ಕೇ ಸುರೂನ ಡಾಕ್ಟರೇಟ್ ಪದವಿನ ಪಡ್ದ ಹೆಮ್ಮೆ ಡಾ। ಬೋಜಪ್ಪನವ್ಕೆ ಸಂದದೆ.**

1972–75 ರ ಅವಧಿಲಿ ಆಗ ಇಲಾಕೆನ ಡೈರೆಕ್ಟರ್ ಆಗಿದ್ದ ಡಾ। ಎಂ.ಎಚ್. ಮರಿಗೌಡರೊಟ್ಟಿಗೆ ಕೆಲ್ಸ ಮಾಡಿಕಂಡಿರಕನ ಡಾ। ಬೋಜಪ್ಪನವು ಇಲಾಕೆನ ಅಭಿವೃದ್ಧಿ ಯೋಜನೆಗಳ ಕಾರ್ಯಗತ ಮಾಡುವಲ್ಲಿ ಯಶಸ್ವಿ ಆದೊ.

ಅಂದ್‌ನ ಸಮೆಲಿ ನಮ್ಮ ರಾಜ್ಯಲಿ ತೋಟಗಾರಿಕೆ ವಿಷಯಲಿ ಡಾಕ್ಟರೇಟ್ ಪಡ್ದವು ಇದ್ದವೇ ಕೆಲವು ಮಾತ್ರ. ಹಂಗಾಗಿ ಕೃಷಿ ವಿಶ್ವವಿದ್ಯಾಲಯ ಬೆಂಗಳೂರು, ಬೋಜಪ್ಪನವರ್ನ ಕೃಷಿ ವಿಶ್ವವಿದ್ಯಾಲಯ ಧಾರವಾಡದ ತೋಟಗಾರಿಕೆ ವಿಭಾಗದ ಪ್ರೊಫೆಸರ್ ಮತ್ತೆ ಇಲಾಕೆನ ಹಿರಿಯ ಅಧಿಕಾರಿಯಾಗಿ ನೇಮಕಾತಿ ಮಾಡ್ದೊ. 1975–80ರ ಮುಟ್ಟ ಮಲೆನಾಡ್‌ನ ಬೆಳೆಗಳಾದ ಕಾಫಿ, ಏಲಕ್ಕಿ, ಕರಿಮೆಣ್ಸ್ ಮುಂತಾದ ಬೆಳೆಗಳ್ನ ಸಮಗ್ರ ಆಗಿ ಬೆಳ್ಸುದರ ತೋರ್ಸಿಕೊಟ್ಟೊ. ಅಷ್ಟೇ ಅಲ್ಲದೆ ಮಿಶ್ರ ಬೆಳೆಯ ಬೇಸಾಯ (ಕೃಷಿ–ತೋಟಗಾರಿಕೆ– ಅರಣ್ಯ–ಹುಲ್ಲುಗಾವಲು ಬೆಳೆಗಳ ಹೊಂದಾಣಿಕೆ ಕ್ರಮ) ಮಾದರಿನ 1500 ಎಕರೆ ಭೂಮಿಲಿ ಅಳವಡಿಸಿ ಆ ಭಾಗದ ರೈತರಿಗೆ ಮನವರಿಕೆ ಮಾಡುವಲ್ಲಿ ಇವು ಸಫಲ ಆದೊ. ಈ ಎರಡ್ ರೀತಿನ ಬೇಸಾಯ ವಿಧಾನನ ಇಂದ್ ಸನ ಅಲ್ಲಿನ ರೈತರ್ ಅನುಸರಿಸಿಕಂಡೊಳೊ.

ಬೆಂಗಳೂರ್ ವಿ.ವಿ.ಯ ಜಿ.ಕೆ.ವಿ.ಕೆ. ಲಿ ಸೆಂಟರ್ ಆಫ್ ಎಕ್ಸೆಲೆನ್ಸ್ ಇನ್ನ್

ಹಾರ್ಟಿಕಲ್ಚರ್ ಯೋಜನೆನ U.N.D.P ಯವು ಸುರು ಮಾಡ್ಕನ ಅಲ್ಲಿ ಕೆಲ್ಸ ಮಾಡಿಕೆ ಇವರ್ನ ಆಯ್ಕೆ ಮಾಡಲಾತ್.

1980–90ರ ಮುಟ್ಟ ಜಿ.ಕೆ.ವಿ.ಕೆ.ಲಿ ಇಲಾಕೆನ ಮುಖ್ಯಸ್ಥರಾಗಿದ್ದೊ. 1990ರ್‌ಲಿ ನಿವೃತ್ತಿಯಾದೊ.

ಇಲಾಕೆಲಿ ಅನೇಕ ಸಂಶೋಧನೆಗಳಿಗೆ ಮಾರ್ಗದರ್ಶಕರಾಗಿದ್ದ್‌ಕಂಡ್ ಸುಮಾರ್ 30–35 ಎಂ.ಎಸ್ಸಿ; ಮತ್ತೆ ಪಿ.ಹೆಚ್‌ಡಿ. ವಿದ್ಯಾರ್ಥಿಗಳ ಸಂಶೋಧನೆಗಳಿಗೆ **ಉನ್ನತ ಸಲಹೆಗಾರ** ಆಗಿಯೂ ಕಾರ್ಯನಿರ್ವಹಿಸಿದ ಕೀರ್ತಿ ಬೋಜಪ್ಪನವರ್ದ್.

ಶ್ರೀಯುತರ ದಕ್ಷತೆನ ನೋಡ್ದ ಭಾರತ ಸರಕಾರ 1985ರ್‌ಲಿ ಜಪಾನ್‌ಗೆ ಕಳ್ಸಿ ಅಲ್ಲಿನ ವಿ.ವಿ ಗಳ ಕಿತ್ತುಳಿ ತಜ್ಞರೊಟ್ಟಿಗೆ ಕಿತ್ತುಳಿ ಹಣ್ಣ್ ವ್ಯವಸಾಯದ ಕುರ್ತ್ ಚರ್ಚೆ ಮಾಡ್ದೊ. ಅಲ್ಲದೆ ಭಾರತದ ಈ ಬೆಳೆ ವಿಚಾರನ ಅಲ್ಲಿನವ್ಕೆ ಮನದಟ್ಟ್ ಮಾಡಿಕೊಟ್ಟೊ. ಅಲ್ಲಿನ ಮುಖ್ಯ ಸಂಶೋಧನೆಗಳ ಫಲನ ಭಾರತಲಿ ಅಳವಡಿಸುವಂಗೆ ಬೋಜಪ್ಪನವು ಉತ್ತೇಜನ ಕೊಟ್ಟೊ.

1990ರ್‌ಲಿ ಇವು ನಿವೃತ್ತರಾದ ಮೇಲೆ ಐ.ಸಿ.ಎ.ಆರ್, ನ್ಯೂ–ಡೆಲ್ಲಿ ಬೋಜಪ್ಪನವರ್ನ ಮೂರು ವರ್ಷಗಳಿಗೆ **ಎಮುರಟಸ್ ಸೈಂಟಿಸ್ಟ್** ಆಗಿ ನೇಮಿಸಿದೊ. ಕೃಷಿ ಮತ್ತೆ ತೋಟಗಾರಿಕೆಲಿ ಯಾವ ಯಾವ ತರಲಿ ಪ್ಲಾಸ್ಟಿಕ್‌ನ ಬಳ್ಸಿಕಂಡ್ ರೈತರ್ ಹೆಚ್ಚಿನ ಬೆಳೆನ ಬೆಳೆಕ್‌ತ್ತೇಳುವ ವಿಚಾರಲಿ ಇವು ಸಂಶೋಧನೆ ನಡ್ಸಿದೊ. ಗ್ರೀನ್ ಹೌಸಸ್ ಮತ್ತೆ ಪಾಲಿ ಹೌಸಸ್, ಹನಿ ನೀರಾವರಿ ವಿಧಾನಗಳ ಅಳವಡಿಸಿಕಂಡ್ ರೈತರ್ ಹೆಚ್ಚ್ ಲಾಭ ಪಡಿತಿರುದು, ಹಣ್ಣ್, ತರಕಾರಿ, ಹೂವುಗಳ ಪರದೇಶಗಳಿಗೆ ರಫ್ತು ಮಾಡ್ತಿರುದರ ಹಿಂದೆನ ಶಕ್ತಿ ಬೋಜಪ್ಪನವರ್ದ್‌ತ ಹೇಳಿಕೆ ಕುಸಿ ಆದೆ.

1993–95ರ ಮುಟ್ಟ ಅಂಡಮಾನ್ ನಿಕೋಬಾರ್‌ನ ಪೋರ್ಟ್ ಬ್ಲೇರ್‌ಲಿರುವ ಕೃಷಿ ಸಂಶೋಧನಾ ಸಂಸ್ಥೆನ ತೋಟಗಾರಿಕೆ ಇಲಾಕೆಲಿ ಆಕಾದ ಸುಧಾರಣೆ ಬಗ್ಗೆ ವಿವರ ಕೊಡಿಕೆತ I.C.A.Rನವು ಶ್ರೀಯುತರ್ನ ಆಯ್ಕೆ ಮಾಡ್ತ್. ಅಷ್ಟೆ ಅಲ್ಲದೆ ಅಮೆರಿಕಾದ ಬಯಲಾಜಿಕಲ್ ಇನ್ಸಿಟ್ಯೂಟ್‌ನ ರಿಸರ್ಚ್ ಬೋರ್ಡ್‌ನ ಸದಸ್ಯರಾಗಿಯೂ ಮೂರು ವರ್ಷದ ಅವಧಿಗೆ ನೇಮಕ ಆಗಿ ಅದರ್‌ಲಿಯೂ ಸೇವೆ ಮಾಡ್ದೊ.

ಬೋಜಪ್ಪನವರ ಮಾರ್ಗದರ್ಶನ ಪಡ್ದ ಎಂ.ಎಸ್ಸಿ.; ಮತ್ತೆ ಪಿ.ಹೆಚ್‌ಡಿ. ವಿದ್ಯಾರ್ಥಿಗ ಇಂದ್ ವೈಸ್‌ಛಾನ್ಸಲರ್ ಆಗಿ, ಡೈರೆಕ್ಟರ್ ಆಗಿ ಮುಂತಾದ

ಕಾರ್ಯನಿರ್ವಹಿಸುತೊಳೊ. ಕೆಲವು ನಿವೃತ್ತರಾಗೊಳೊತ ಬೋಜಪ್ಪನವು ಕುಸಿಂದ ಹೇಳಿಕಂಡವೆ.

ಇವು ಕರ್ತವ್ಯದ ಮೇರೆಗೆ ಹಂಗೆನೆ ಸ್ವ ಅನುಭವಕ್ಕಾಗಿ ಜಪಾನ್, ಅಂಡಮಾನ್ ನಿಕೋಬಾರ್, ಇಂಡೋನೇಷ್ಯಾ, ಸಿಂಗಾಪುರ, ಮಲೇಶಿಯಾ ಮುಂತಾದ ದೇಶಗಳಿಗೆ ಭೇಟಿ ಕೊಟ್ಟ ಖ್ಯಾತಿ ಇವರ್ದ್.

ಡಾ। ಬೋಜಪ್ಪನವು ಹಲವು ಪ್ರಶಸ್ತಿ ಮತ್ತೆ ಸನ್ಮಾನ ಪಡ್ದ್ ನಾಡಿಗೆ ಗೌರವ ತಂದೊಳೊ.

ಅದರ ವಿವರ :

* Meritorious Service UAS award on University Foundation Day.
* Teacher of teachers award from University of Horticultural Sciences.
* Alma mater award from UAS, Dharwad for distinguished service
* Silver Jubilee Award by the precision farming Development Centre, Department of Horticulture, UAS, Bangalore for pioneering works in the Development of Plasticulture center for the first time in UAS, Bangalore.
* Award for Academic Excellence from the Alma Mater on its Centenary Celebrations at Kodagu.
* Nadaprabhu Kempegowda Award - 2018
* Sanmana for Distinguished social service by kodagu Samaja, Banglore.
* Sanmana for Distinguished Social Service by Kodagu and Dakshina Kannada Samaja on its Suvarna Sambrama Celebretions.

ವೃತ್ತಿಂದ ನಿವೃತ್ತಿ ಆಗಿ 28 ವರ್ಷ ಆದರೂ ಸನ ಪ್ರವೃತಿ ಅವರ್ನ ಬುಟ್ಟತ್ಲೆ. ಅವರ ಕಾರ್ಯಕ್ಷೇತ್ರದ ವಿಸ್ತಾರ ಹಿಂಗುಟ್ಟು :

ಕೊಡಗು ಎಜುಕೇಷನಲ್ ಅಕಾಡೆಮಿ, ಬೆಂಗಳೂರು ಅದರ ಹಿರಿಯ ಸಲಹೆಗಾರರಾಗಿ ಹತ್ತ್ ವರ್ಷಗಳ ಸೇವೆ. ಕೊಡಗು ಗೌಡ ಸಮಾಜ ಅಲ್ಲದೆ ಕೊ. ಗೌ. ಸಮಾಜ ಮತ್ತೆ ದ. ಕನ್ನಡ ಗೌಡ ಸಮಾಜ ಬೆಂಗಳೂರು ಇಲ್ಲಿ ತುಂಬಾ ವರ್ಷಗಳ್‌ಂದ ಸೇವೆ. ಆರ್.ಟಿ. ನಗರ ನಿವಾಸಿಗಳ ಕ್ಷೇಮಾಭಿವೃದ್ಧಿ ಸಂಘ ಮತ್ತೆ ಥೊರೋ ಫೌಂಡೇಶನ್ ಇದರ ಉಪಾಧ್ಯಕ್ಷರಾಗಿ ಸೇವೆ. ನೂರಾರ್ ಎಕರೆ ಇರುವ ಹೆಬ್ಬಾಳ ಕೆರೆಯ ರಕ್ಷಣೆ, ಅದರ ಸುತ್ತ ಒಳ್ಳ ಪರಿಸರ ಇರುವಂಗೆ ಅಲ್ಲದೆ ಉದ್ಯಾನವನಗಳ ಸ್ಥಾಪನೆಲಿ ಇವರ ಸೇವೆ ಅಮೋಘ. ಇಂದ್ ಅಲ್ಲಿ ಬೆಳ್ದ್ ನಿತ್ತ ಮರಗಿಡಗಳೇ ಸಾಕ್ಷಿಯಾಗೊಳೊ. ಅಷ್ಟೇ ಅಲ್ಲದೆ ಆರ್. ಟಿ. ನಗರ ಠಾಗೋರ್ ನಗೆ ಕೂಟದ ನಿರ್ದೇಶಕರಾಗಿ ಕಳ್ದ ಹದಿಮೂರು ವರ್ಷಗಳ್‌ಂದ ಸೇವೆ ಮಾಡ್ತಾ ಇರುವ ಇವು ಹಿಂಗೆ ಹಲವು ಸಂಘ ಸಂಸ್ಥೆಗಳ್‌ಲಿ ತಮ್ಮ ಸೇವೆನ ಸಂದಾಯ ಮಾಡ್ತಾ ಒಳೊ.

<u>ಬೋಜಪ್ಪ–ಬೋಜಮ್ಮ ಆದರ್ಶ ದಂಪತಿಗ :</u> ಡಾ। ಬೋಜಪ್ಪನವು 1956ರ್‌ಲಿ ವಿರಾಜಪೇಟೆ ಕಾಕೋಟು ಪರಂಬುನ ಗುಡ್ಡಂಡ್ರ ಕಾರ್ಯಪ್ಪ–ಗಂಗಮ್ಮ ದಂಪತಿಗಳ ಎರಡನೇ ಮಗುಳು ಬೋಜಮ್ಮನವರ್ನ ತನ್ನ ಅರ್ಧಾಂಗಿ ಆಗಿ ಸ್ವೀಕರಿಸಿದೊ. ಬೋಜಪ್ಪ–ಬೋಜಮ್ಮ ಆದರ್ಶ ದಂಪತಿಗತ ಹೆಸ್ರಾದೊ. ಇವ್ಕೆ ಒಬ್ಬಳು ಮಗಳು, ಇಬ್ಬರು ಗಂಡ್ ಮಕ್ಕಳ ತುಂಬು ಸಂಸಾರ. "ನನ್ನ ಹೆಣ್ಣ್ ನಂಗೆ ದಾರಿದೀಪ, ಮಾರ್ಗದರ್ಶಕಿ, ಸ್ಫೂರ್ತಿ, ಚೇತನ ಆಗಿತ್ತ್"ತ ಬೋಜಪ್ಪನವು ಹೃದಯಂತರಾಳಂದ ಹೇಳಿಕಣ್ತಾ ತಮ್ಮ ಅರ್ಧಾಂಗಿನ ಕೊಂಡಾಡಿವೆ. ಅವ್ರ ಬಾಳ ಸಂಗಾತಿ ಆಗಿ 62 ವರ್ಷಗಳ ಕಾಲ ಮುಟ್ಟ ಹೆಗ್‌ಲಿಗೆ ಹೆಗ್‌ಲ್ ಕೊಟ್ಟ ಶ್ರೀಮತಿ ಬೋಜಮ್ಮನವು ಇತ್ತೀಚೆಗೆ ತೀರಿಕಂಡೊತ್ತೇಳ್ದು ವಿಷಾದನೀಯ.

**ಡಾ। ಬೋಜಪ್ಪನವ್ಕೆ ಇದೀಗ ಎಂಬತ್ತೆಂಟರ ಹರಯ.** ಯಾಗೋಳೂ ಕ್ರೀಯಾಶೀಲರ್. ಈ ಇಳಿ ಪ್ರಾಯಲೂ ಅವರ ನೆನಪುನ ಶಕ್ತಿ ಅಗಾಧ ಆಗುಟ್ಟು. ಓದಿದ ಕೂಡಲೆ ಪ್ರತಿಕ್ರಿಯಿಸಿ ಪ್ರೋತ್ಸಾಹಿಸುವ ದೊಡ್ಡ ಗುಣ ಅವರ್ದ್. ಪ್ರತಿಭಾವಂತ ಡಾ। ಬೋಜಪ್ಪನವರ ಸಲಹೆ ಸಮಾಜಕ್ಕೆ ಯಾಗೊಳು ಸಿಕ್ಕಲಿತ ಹಿಂಗಾರ ಬಯ್ಸಿದೆ. ಅವರ ಆರೋಗ್ಯ ಪೂರ್ಣ ಜೀವನಕ್ಕೆ ಶುಭ ಹಾರೈಸಿದೆ.

ಬೋಜಪ್ಪನವರ ಚರ ದೂರವಾಣಿ : 9738450971

ಸ್ಥಿರ ದೂರವಾಣಿ : 080–23334111

**✍ ಬಾರಿಯಂಡ ಜೋಯಪ್ಪ**

ಕತಾ ಜೊಂಪೆ

# ಜೋಮಾಲೆ

ಬೇಷ ತಿಂಗಳ ರಣ ಬಿಸ್‌ಲ್, ತಡಿಯಕೆ ಬೊತ್ತದ ಸೆಕೆಲಿ ಕಾವೇರಮ್ಮ ಅಂಗಳಲಿ ಸಂಡಿಗೆ ಬಾಳಕಗಳ ಒಣಗಿಕೆ ಹಾಕಿಕಂಡ್ ಇದ್ದೊ. ಈ ಕೊಡ್‌ಗ್‌ಲಿಯೇ ಇಂತಾ ಬಿಸ್‌ಲ್ ಆದರೆ ಮಂಗ್ಳೂರು ಕಡೆ ಹೋಕೇ ಬೊತ್ತು. ಪೂರಾ ಕರಂಚಿಯೇ ಹೋದೂಂತ ಗ್ರೇಸಿಕಂಡ್ ಸಂಡಿಗೆನ ಮೊಗ್‌ಚಿ ಹಾಕ್ಯಂಡ್ ಇರ್‌ಕನ ಗಂಡ ಬೋಪಯ್ಯನವು ಸ್ಕೂಟರ್‌ಲಿ ಬಂದ್, ಶೆಡ್ಡ್‌ಲಿ ಸ್ಕೂಟರ್‍ನ ನಿಲ್ಸಿ ಕೈಕಾಲ್ ತೊಳಿಯಕೆ ಹೋದೊ. ಈ ಬಿಸ್‌ಲ್‌ಲಿ ಎಂತವನೂ ಕೈಕಾಲಿಗೆ ನೀರ್ ಹಾಕೊಕೇ. ಮೀಂದಾಂಗೆ ಬೆಗರ್ ಅರ್ದದೆ. ಕೈ ಕಾಲ್ ತೊಳ್ದದ್ ಬಂದ ಗಂಡ ಫ್ಯಾನಿನ ಸುಚ್ಚ್ ಹಾಕಿ ಸೋಪಲಿ ಉಸ್ಸಪ್ಪಾಂತ ಕುದ್ದೊ. ಅಸ್ಟೊತ್ತಿಗೆ ಕಾವೇರಮ್ಮ ನಿಂಬುಳಿ ಜ್ಯೂಸ್ ತಂದ್ ಕೊಟ್ಟೊ. ಅದರ ಒಂದೇ ಡಮ್ಮ್‌ಲಿ ಗಟಗಟನೆ ಕುಡ್ದ್ ಬೆಗರ್ ಒರ್ಸಿಕೊಂಡೊ. "ನೀವುಗೆ ಯಾಕೆ ಬೇಕು ರಾಜಕೀಯ? ಯಾರಾರೊಟ್ಟಿಗೆ ಸುತ್ತಿಕಂಡ್ ಇರ್ದಕ್ಕಿಂತ ಮನೆಲಿ ತೋಟ ತೊಡಿಗೆ ನೋಡಿಕಂಡ್ ತೆಪ್ಪಗೆ ಇರಕಲ್ಲಾ?" "ನೋಡು ಕಾವೇರಿ ನಂಗೆ ಮನೇಲೆ ಇರಿಕೆ ಆದುಲ್ಲೆ. ಏನಾರ್ ಹಂಞ ಸಮಾಜಸೇವೆ ಮಾಡೊನಾಂತ". "ನೀವುಗೆ ನಾ ಮೊದುವೆ ಆಗಿ ಬಂದಲ್ಲಿಂದ ನೋಡ್‌ತ್ತಾ ಒಳೆ ಯಾಗೊಳು ಪುರುಸೊತ್ತು ಇಲ್ಲೆ. ಪಿಂಚಣಿ ಆಕೆ ಮುಂದೆ ಆಫೀಸ್ ಗೀಪೀಸ್ ಆತ್. ಎಲ್ಲಾ ತಾನೆ ತಲೆ ಮೇಲೆ ಹೊತ್ತ್ ಕಂಡವರಾಂಗೆ ಆಡ್‌ತ್ತಾ ಇದ್ದರಿ. ಈಗ ಈಗ ಈ ಸುಟ್ಟ ರಾಜಕೀಯ." "ಆತ್ ಮಾರಾಯಿತಿ, ನಿಂಗೆ ಒಂಚೂರು ಮನ್‌ಸಿಲ್ಲರೆ ನಂಗೆ ಯಾದೂ ಬೇಡ. ಮನೇಲೇ ಕುಕ್ಕುರು ಬೊಡ್ಕಂಡ್ ಇದ್ದನೆ."

"ನಾ ಹಂಗೆ ಹೇಳ್‌ದಲ್ಲಾ? ನೀವುಗೆ ಈ ಪ್ರಾಯಲಿ ಹಂಞ ರೆಸ್ಟ್ ಬೇಕು; ಈ ಬಿಸ್‌ಲ್ ಮಳೇಂತ ನೋಡದೆ ಯಾರ್‍ಯಾರ್ದೊ ಕೆಲ್ಸಕ್ಕೆ ಹೊತ್ತು ಹೊತ್ತುಗೆ ಸೆರಿಯಾಗಿ ಊಟ ತಿಂಡಿ ಮಾಡದೆ ಸುತ್ತಾಡಿಕಂಡ್ ಇದ್ದರೆ ನಿಮ್ಮ ಆರೋಗ್ಯದ ಗತಿ ಏನಾದು?" ನೀವುಗೆ ಈ ಸಮಾಜ ಸೇವೆಲಿ ಕುಸಿ ಉಟ್ಟುತಾದರೆ ನಂದೇನು ಅಡ್ಡಿಯಿಲ್ಲೆಪ್ಪಾ"

"ಹಾಂ..... ಅದೆಲ್ಲಾ ಇರ್ಲಿ. ಮಂಜ ಜಗ್ಗಂದ್ ಪೋನ್ ಬಂದುಟೂಂತ ಹೇಳ್ದಲ್ಲಾ? ಏನ್ ವಿಸೇಸ? ಪಿಳ್ಳಿಕೂಸು ಹೇಂಗುಟ್ಟುಗಡ? ಊರಿಗೆ ಬಂದೆವನಾ?"

"ನಾನೂ ಊರಿಗೆ ಒಮ್ಮೆ ಬಂದು ಹೋಗಿ, ಬಾರದೆ ವರ್ಸ ಹಕ್ಕಲೆ ಆತ್.

ಕೂಸುನ ನೋಡೊಕೂಂತ ಆಸೆ ಆದೇಂತ ಹೇಳ್ದ್. ಅದಕ್ಕೆ ಅಂವ ನಂಗೆ ಈಗ ರಜೆನೇ ಸಿಕ್ಕುಲೆ. ಸರಳಂಗೆ ಒಂದಕ್ಕೆ ಅಸ್ಟ್ ದೂರ ಕೂಸುನೂ ಕರ್ಕಂಡ್ ಬಾಕೆ ಕಸ್ಟ. ನೀವೇ ಬಂದ್ ಹೋಗೀಂತ ಹೇಳ್ತ್."

"ಈಗ ಏನ್ ಮಾಡ್ದು ನಂಗಂತೂ ಹಂಞ ದಿನ ಒಂಚೂರು ಪುರುಸೊತ್ತು ಇಲ್ಲೆ. ನೀ ಒಮ್ಮೆ ಹೋಗಿ ಬಾದಾದರೆ ಬಾ"ಂತ ಹೇಳ್ದೊ ಬೋಪಯ್ಯ. ಹಾಂ ಹೇಳಿಕೆ ಮರ್ತೆ ನಮ್ಮ ಈರಪ್ಪ ಮಾಂವ. ಮರ್‌ಗೋಡುನವು ಗೊತ್ತುಟಲ್ಲಾ! ಅವು ಮನ್ನೆ ಮಡಿಕೇರಿಲಿ ಸಿಕ್ಕಿದೊ. ಗುರ್ತನೇ ಸಿಕ್ಕುದುಲೆ ಹಂಗೆ ಲಾಚಾರ್ ಆಗೊಳೊ. ಅವರ ಮಂಜ ಒಬ್ಬ ಅಮೆರಿಕಲಿ, ಮಗಳು ಆಸ್ಟ್ರೇಲಿಯಲಿ. ಒಬ್ಬೊನು ಬಾದು ಹೋದು ಬುಡ್. ಫೋನು ಮಾಡ್ದುಲ್ಲೆ ಗಡ. ಇವು ಈಗ ಅರೆಹುಚ್ಚನಾಂಗೆ ಆಗೋಳೊ. ಇದ್ದ ತೋಟನ ಮಾರಿ ಕುಶಾಲನಗರಲಿ ಹೊಸ್ತ್ ವೃದ್ಧಾಶ್ರಮ ಆಗುಟ್ಟು ಗಡ ಅದಕ್ಕೆ ಸೇರ್ದೂಂತ ಮಾಡಿಯೊಳೇಂತ ಹೇಳ್ದೊ. "ಅಯ್ಯೋ ಮೊನ್ನನ ಪಾಡೇ" ಹಂಗೆ. ಹಾಂಗೆ ನಾವುಗೆ ಎರ್ಡ್ ಸೀಟ್ ಈಗಲೇ ಬುಕ್ ಮಾಡಿ ಇಸುದಾ ಹೇಂಗೆ'ಂತ ಕಾವೇರಮ್ಮ ಬಾಯಿಗೆ ಕೋಲು ಹಾಕಿದೊ ಬೋಪಯ್ಯ. ಗಂಡನ ಮಾತ್ ಕೇಳಿ ಕಾವೇರಮ್ಮನ ಕಣ್ಣಿಂದ ಕಾವೇರಿ ಹರಿಯದೇನೊ ಪುಣ್ಯ. "ನೀವುಗೇನ್ ಹುಚ್ಚು? ಎಂತಾ ಮಾತಾಡ್ರೆ? ಈರಪ್ಪ ಮಾಂವನ ಮಕ್ಕಳಾಂಗೊ ನಮ್ಮ ಜಗ್ಗ? ಅಂವ ನಮ್ಮ ಬುಟ್ಟು ಹಾಕುದಾ?"ಂತ ಹೇಳಿಕಂಡ್ ಉಂಬಕೆ ರೆಡಿ ಮಾಡಿಕೆ ಒಳಗೆ ಹೋದೊ ಕಾವೇರಮ್ಮ.

ಕಾವೇರಮ್ಮಂಗೆ ಈಗ ಬೆಂಗಳೂರಿಗೆ ಮಂಜನ ಮನೆಗೆ ಹೊರ್ಡುವ ಸಂಭ್ರಮ! ಉಪ್ಪಿನಕಾಯಿ, ಸಾಂಬಾರ್ ಹೊಡಿ, ಕಾಫಿ ಹೊಡಿ, ಹಪ್ಪಳ, ಸಂಡಿಗೆ, ಬಾಳಕಗಳೆಲ್ಲಾ ಪೇಕ್ ಮಾಡ್ದೇ ಕೆಲ್ಸ. ಬಾಳೇಕಾಯಿ, ಬಟರ್ ಫ್ರೂಟ್, ಸೀಬೇಕಾಯಿಂತ ಇದ್ದೆಲ್ಲ ಹಣ್ಣ್‌ಗ. ಇನ್ನು ಪಿಳ್ಳಿಗೆ ಹೊಸ ಬಟ್ಟೆ. ಹೀಂಗೆ ಎಲ್ಲಾ ಸಾಮಾನ್‌ಗಳ ಕಟ್ಟ್‌ಕನ ಮನ್‌ಸ್‌ಲಿ ಏನೋ ಎಲ್ಲಾ ಯೋಚನೆಗ. ಈ ಮಕ್ಕಳೆಲ್ಲಾ ಹೆಚ್ಚಿ ಓದ್‌ಸಿಕೆ ಆಗದ್. ಅವು ಓದಿ ಆ ಕಂಪೆನಿಲಿ ಸಂಬಳ ಹೆಚ್ಚಿ, ಈ ಕಂಪೆನಿಲಿ ಸಂಬಳ ಹೆಚ್ಚೀಂತ ದೇಸ ಬುಟ್ಟ್ ಅಮೇರಿಕ. ಸಿಂಗಾಪುರಂತ ಹಾರುವೆ. ಊರ್‌ಲಿ ಇರುವ ಅಯ್ಯೆ ಅಪ್ಪ ಕಡೇ ಕಾಲಲಿ ಯಾರೂ ಇಲ್ಲದೆ ನರ್ಕ ಬಂದವೆ. ಇದ್ದದರ ಬೇಯ್ಸಿ ಹಾಕಿಕೂ ಜನ ಇರ್ದುಲ್ಲೆ. ಕಾಯಿಲೆ ಬಿದ್ದರೆ ದೇವ್ರೇ ಗೆತಿ. ಮತ್ತೆ ವೃದ್ಧಾಶ್ರಮನೇ ಮನೆ–ಮಸಣ! ಕೆಲವು ಮಕ್ಕ ಅಯ್ಯೆ ಅಪ್ಪನ ಅವು ಇದ್ದಲ್ಲಿಗೆ ಕರ್ಸಿಕಂಡವೆ. ಇನ್ನು ಕೆಲವುಕೆ ನೆನಪೇ ಇರ್ದುಲೆ. ಮಕ್ಕ ಕರಿಯಕನ ಅವು ಇದ್ದಲ್ಲಿಗೆ ಯಾದೇ ದೇಸ ಇರ್ಲಿ ಹೋಕು. ಮಕ್ಕಳ ಏಳಿಗೆನೇ ಹೆತ್ತವುಕೆ ಬೇಕಾದ್ದ್ ತಾನೆ? ನಮ್ಮ ದೊಡ್ಡವ್ವ ಒಂದು ಮಂಜನ ಹಕ್ಕಲೆ ಅಮೆರಿಕಕ್ಕೆ

ಹೋದ ಗಿರಾಕಿ ಆರು ಮೂರು ತಿಂಗಲ್ಲಿ ಊರಿಗೆ ಬಾತ್. ಅಲ್ಲಿ ನಂಗೆ ಸೆರಿಯೇ ಆದುಲ್ಲೆ. ಅಲ್ಲಿನ ಜನ ಯಾರೋ, ಬಾಸೆ ಎಂತದೊ. ಉಂಬೋದು ತಿಂಬೋದು ಏನೋ ಎಲ್ಲಾಂತ ನಮ್ಮೂರ್ಲಿ ಒಂಟಿಯಾದರೂ ಇರ್ವೆ. ಹೇಂಗಾದರೂ ಆದೆಂತ ಬಂದೇ ಬುಟ್ಟುತ್. ಊರಿಗೆ ಬಂದರೆ ಯಾರ್ ಮೂಸುವೆ. ದುಡ್ಡ್ ಇರ್‌ಕನ ಮುಟ್ಟ ನಾ ಒಳೆ, ಹಂಗೆ ಮಾಡ್ನೆ ಹಿಂಗೆ ಮಾಡ್ನೇಂತ ಅಜ್ಜಿನ ಕೆಬಿಕುತ್ತ ಮಾಡ್ರಿ, ಮತ್ತೆ ಬೀದಿಗೆ ನೂಕಿದೊ. ಎಂತಾದರೂ ಪ್ರಾಯ ಆದ ಮೇಲೆ ಮಕ್ಕಳೊಟ್ಟಿಗೆ ಹೊಂದಿಕಣಕು. ನಮ್ಮ ಆಸೆ ಆಕಾಂಕ್ಷೆಗಳ ಹಂಞ ಬುಟ್ಟ್ ಮಕ್ಕಳ ಶ್ರೇಯಸ್ಸೇ ಮುಖ್ಯಂತ ಇರೊಕು. "ಆತ ಮಾರಾಯ್ತೀ ನಿನ್ನ ಪೇಕ್‌ಗಂತ ಗಂಡ ಕೇಳ್ಕನೇ ಕಾವೇರಮ್ಮ ಈ ಲೋಕಕೆ ಬಂದದ್." ನಿಂಗೆ ಸ್ಪೆಷಲ್ ಬಸ್ಸೇ ಬುಕ್ ಮಾಡೊಕು ಕಂಡದೆ! ಅಸ್ಟ್ ಲಗೇಜೂ ಉಟ್ಟು!? ಹೋದಂವ ಅಲ್ಲೇ ಪರ್ಮನೆಂಟಾಗಿ ಮಂಜನ ಮನೇಲಿ ಠಿಕಾಣಿ ಹೂಡುವ ಯೋಚನೆನೂ ಹೆಂಗೇಂತ" ಗಂಡ ತಮಾಸೆ ಮಾಡ್ರೂ ಕೆಬಿಗೆ ಹೋತ್ಲೆ.

ಅಲ್ಲಾ, ಈ ಸತ್ತಿ ಮಂಜ ಇಸ್ಟ್ ಒತ್ತಾಯಲಿ ನೀ ಒಬ್ಬಾರ್ ಬಾ ಅಮ್ಮಾಂತ ಒತ್ತಾಯ ಮಾಡ್ದ್ ಯಾಕೆ? ಒಂದೂ ಅಂದಾಜೆ ಆದುಲ್ಲೆ. ಅಮ್ಮಾ, ನಂಗೆ ಕೆಲ್ಸ ಸಿಕ್ಕಿದ ಕೂಡ್ಲೆ ನನ್ನ ಸಂಬಳಲಿ ನಿಂಗೆ 'ಜೋಮಾಲೆ' ಮಾಡ್ಸಿ ಕೊಟ್ಟನೇಂತ ಹೇಳಿತ್ತ್. ಬಹುಸ ಅಮ್ಮಂಗೆ ಈ ಸರ್ತಿ ಅದರ ಮಾಡ್ಸಿ ಕೊಡಿಕೆ ಒತ್ತಾಯ ಮಾಡಿ ಕರ್ದದ್ ಆಗಿರೊಕು. ಪಾಪ. ಓದಿದ ಕೂಡ್ಲೆ ಕೆಲ್ಸ ಸಿಕ್ಕಿರೂ ಬೇಂಕ್‌ಲಿ ಓದಿಕೆ ಮಾಡ್ದ ಲೋನ್‌ನ ಕಟ್ಟಿಕೆ ಆತ್. ಮತ್ತೆ ನಾವೇ ಅವನ ಒತ್ತಾಯ ಮಾಡಿ ಮೊದುವೆನೂ ಮಾಡ್ಸಿದೊ. ಸಂಸಾರ ಸುರು ಆತ್. ವರ್ಸ ಆಕನೆ ಕೂಸುನು ಹುಟ್ಟಿತ್. ಮತ್ತೆ ಹೇಂಗೆ ಅಂವ ನಂಗೆ 'ಜೋಮಾಲೆ' ಮಾಡ್ಸುದು?"

ಹೌದು. ಕಾವೇರಮ್ಮಂಗೆ ಆ ಜೋಮಾಲೆಂತ ಹೇಳ್ರೆ ಎಲ್ಲಿಲ್ಲದೆ ಕುಸಿ! ಅಪ್ಪ ಮೊದುವೆಗಾಕನ ಪ್ರೀತಿಂದ ಮಾಡ್ಸಿಕೊಟ್ಟ ಜೋಮಾಲೆ ಅದ್. ತೆಳ್ಳಂಗೆ ಬೆಳ್ಳಂಗೆ ಉರುಟುರುಟು ಮೋರೆನ ಮುಗುಳು ನೆಗೆನ ಕಾವೇರಮ್ಮ ಆ ಜೋಮಾಲೆ ಹಾಕ್‌ಕನ ದೊಡ್ಡ ರಂಬೆನಾಂಗೆ ಕಾಂಬತಿತ್ತ್. ಅದರ ಹಾಕಂಡ್ ಯಾರ್ದಾರ್ ಮೊದವೆಗೊ, ಎಂಗಜ್ಮೆಂಟಿಗೊ ಹೋದರೆ ಜನ ಎಲ್ಲಾ ತಿರ್ಗಿ ತಿರ್ಗಿ ಕಾವೇರಮ್ಮನೇ ನೋಡ್‌ತಿದ್ದೊ. ಹೆಂಗ್ಸ್‌ನ ಬಂದ್ ಮುಟ್ಟಿ ಮುಟ್ಟಿ ನೋಡಿ ಬಾರಿ ಲಾಯಿಕ್ ಉಟ್ಟೂಂತ ಹೇಳ್ಕನ ಕಾವೇರಮ್ಮಂಗೆ ಕೊಂಬು ಮೂಡ್‌ತಿತ್ತ್. ಒಂದ್ ಗತ್ತ್ ಬಾತಿತ್ತ್. ಒಳ್ಳೆ ಹತ್ತ್ ಪವನ್‌ನ ಜೋಮಾಲೆನ ನೋಡ್ಕನ ಕಣ್ಣ್ ತುಂಬುದು. ಅದರ ಎಲ್ಲಿ ಮಾಡ್ಸಿದ್, ಎಸ್ಟ್ ಆತ್‌ಂತೆಲ್ಲಾ ಕೇಳ್ಕನ ಕುಸಿಯೋ ಕುಸಿ. ಹಕ್ಕಲೆ

ಸಂಬಂಧದ ಮೊದುವೆಲಿ ಮೊದೊಳಿಗೆಗೆ ಹಾಕಿಕೂ ಕೊಡುತಿದ್ದೊ ಕಾವೇರಮ್ಮ. ಕೆಲವೊಮ್ಮೆ ಈ ನಗ ಆಪತ್ತಿಗೂ ಆತಿತ್. ಬೋಪಯ್ಯನವುಕೆ ಹಾರ್ಟ್ ಆಪರ್ಸನ್ ಆಕನ, ಅವರ ತಂಗೆನ ಮೊದುವೆ ಸಮೆಲಿ, ಮನೆ ಕಟ್ಟ್‌ಕನ, ಜೋಮಾಲೆನ ಅಡು ಇಸಿ ದುಡ್ಡು ತಕಂದೂ ಉಟ್ಟು. 'ಆಪತ್ತಿಗೆ ಇಲ್ಲದ ನಗ ಎಂತಕೇಂತ ಕಾವೇರಮ್ಮ ಹಿಂದೆ ನೋಡದೆ ಕೊಡ್‌ತಿದ್ದೊ. ಅಕೇರಿಗೆ ಮಂಜ ಜಗ್ಗ ಇಂಜಿನಿಯರಿಂಗ್ ಕಲಿಯಕನ ದುಡ್ಡು ಹೊಂದಿಸಿಕೆ ಏನ್ ಮಾಡ್ರೂ ಆಗದೆ ಮಾರಿಕಾಗಿನೇ ಬಾತ್. ಇದ್ದ ಒಬ್ಬ ಮಂಜನ ಇಂಜಿನಿಯರಿಂಗ್ ಮಾಡ್ಲೊಕೂಂತ ಅಯ್ಯೆ ಅಪ್ಪ ಪಟ್ಟ ಪಾಡ್ ಅಸ್ಟಿಷ್ಟಲ್ಲ. ಹಾಂಗೂ ಹೀಂಗೂ ಓದಿ ಆದ ಕೂಡ್ಲೆ ಹೆಚ್. ಪಿ ಕಂಪೆನೀಲಿ ಒಳ್ಳೆ ಸಂಬಳದ ಕೆಲ್ಸನೂ ಸಿಕ್ಕಿತ್. ಆಗ ನಾವು ಪಟ್ಟ ಪಾಡ್ ಸಾರ್ಥಕ ಆತ್‌ಂತ ಗ್ರೇಸಿಕಂಡೊ. ಹೊತಾರೆ ಆರ್ ಗಂಟೆಗೆ ಮೆಜೆಸ್ಟಿಕ್‌ಲಿ ಬಸ್ ಇಳಿಯಕನ ಮಂಜ ಜಗ್ಗ ಕಾರ್ ತಕಂಡ್ ರೆಡಿ. ಅಲ್ಲಿಂದ ಮಂಜನ ಮನೆ – ವಿದ್ಯಾರಣ್ಯಪುರಕ್ಕೆ ಕಾರ್‌ಲಿ ಅರ್ಧಗಂಟೆನೂ ಇಲ್ಲೆ. ಮನೆ ಬಂದೇ ಬುಟ್ಟತ್. ಸೊಸೆ ಹೆತ್ತ್ ಬಾಣಂತನನ ಮುಗ್ಸಿ ಎರ್ಡ್ ತಿಂಗಲ್ಲಿ ಬೆಂಗಳೂರಿಗೆ ಹೊರ್ಡ್‌ಕನ ಕೂಸು ಅನಘ ಸಣ್ಣ ಬೊಮ್ಮಟೆ. ಈಗ ಅವಂಗೆ ವರ್ಸ ಆಕಂಡ್ ಬಾತ್. ಈಗಳೆ ಲೂಟಿಂತೇಳ್ರೆ ಲೂಟಿ. ಪುಂಡು ಪೋಕ್ರ. ಅವ್ವನ ನೋಡಿ ಸುರುಗೆ ಹಂಞಾ ಅಮ್ಮನ ಹಿಂದೆ ಅಂಡ್‌ಗಿಕೆ ನೋಡ್ದಂವ. ಮತ್ತೆ ಮೆಲ್ಲೆ ಮೆಲ್ಲೆ ಹಕ್ಕಲೆ ಬಂದ್ ಹೊಂದಿಕೊಂಡದ್ ಕಂಡ ಸೊಸೆಗೆ ಸಮಾಧಾನ!

ಬೆಂಗ್ಳೂರ್ಲಿ ಪ್ಲಾಟ್‌ನ ಮನೆ ನೋಡಿ ಕಾವೇರಮ್ಮಂಗೆ ಉಸ್ಸಪ್ಪಾಂತ ಉಸುರು ಬುಡುವಾಂಗೆ ಆತ್. ಮಂಜ ಹೊತಾರೆ ಎಂಟ್ ಗಂಟೆಗೆ ಆಪೀಸಿಗೆ ಹೋದರೆ ಬಾದು ರಾತ್ರೆ ಎಂಟುವರೆ ಒಂಬತ್ತ್ ಗಂಟೆಗೆ. ಕೆಲವು ದಿನ ತುಂಬಾ ಕೆಲ್ಸಾಂತ ಆರ್ ಗಂಟೆಗೆ ಏನೂ ತಿನ್ನದೆ ಹೋದು ಉಟ್ಟು.. ಕತ್ತಲೆಗೆ ಬಾಕನ ಅವನ ಮೋರೆ ನೋಡಿಕೆ ಬೊತ್ತ್! ಬೊಚ್ಚಿ ಸುಟ್ಟ ಬದನೆಕಾಯಿನಾಂಗೆ ಆಗಿದ್ದದೆ ಮೋರೆ. ಕೈಕಾಲ್ ತೊಳ್ದ್ ಸೊಫಲಿ ಕುದ್ದ್‌ಕಂಡ್ ಕೂಸುನ ಕೊಂಡಾಟ ಮಾಡಿಕಂಡ್ ಇರ್ಕನ ಏನೂ ಮಾತಾಡಿಕೆ ಮನ್ಸು ಬಾಲೆ. ಒಮ್ಮೊಮ್ಮೆ ಒಂದ್ ಹನಿಮನಿ ಟಿ.ವಿ. ನೋಡ್ರು ಆತ್. ವಾರಲಿ ಎರ್ಡ್ ದಿನ ರಜೆ ಏನೋ ಉಟ್ಟು. ಅಂದೂ ಅವಂಗೆ ಪುರುಸೊತ್ತ್ ಮನಿ ಉಟ್ಟೋ ಅದೂ ಇಲ್ಲೆ. ಬೆಂಗ್ಳೂರುನವುಕೆ ಬೊಳ್ಪಾದೇ ಹತ್ತ್ ಗಂಟೆಗೆ. ಕಾಪೀಗೀಪಿ ಕುಡ್ದ್ ಪೇಪರ್ ನೋಡಿಕೆ ಕುದ್ರಿಕನ ಸುರು ಆದೆ ಅವನ ದೋಸ್ತಿಗಳ ಆಪೀಸ್‌ನವರ ಫೋನ್. ಮತ್ತೆ ಕೆಲವು ವಾರ ಯಾರ್ಯಾರ್ದೋ ಮನೆಲಿ ಕಾರ್ಯಕ್ರಮ. ಬರ್ತಡೇ, ಮನೆ ಸೇರ್ದು, ಮೊದುವೆ, ಪೂಜೇಂತ!

ರಜೆಲೂ ಲಾಯಿಕ್‌ಲಿ ಕುದ್ದ್‌ಕಂಡ್ ಮಂಜನೊಟ್ಟಿಗೆ ಮಾತಾಡುವಾಂಗೆ ಇಲ್ಲೆ!?

ಇನ್ನು ಸೊಸೆಗೆ ಮಾತ್ ಕಮ್ಮಿ. ಮನೆಲೇ ಇದ್ದರೂ ಎಸ್ಟ್ ಬೇಕೋ ಅಸ್ಟೇ ಮಾತ್. ಅಡಿಗೆ ಕೆಲ್ಸಕ್ಕೆ ಸೇರ್ದ್ರ ಸೊಸೆಗೆ ಕುಸಿ ಇಲ್ಲೇಂತ ಹಂಞಾ ದಿನಲೇ ಗೊತ್ತಾತ್. ಸೊಸೆ ಎಂ.ಎಸ್ಸಿ. ಒಳ್ಳೆ ಕೆಲ್ಸಲೂ ಉಟ್ಟು. ಹೆರಿಗೆ ರಜೆ ಮಾಡ್ದ ಗಿರಾಕಿ ಇನ್ನೂ ಕೆಲ್ಸಕ್ಕೆ ಸೇರ್‌ತ್ಲೆ. ಪಿಳ್ಳೆನೊಟ್ಟಿಗೆ ಆಡಿಕೆ, ಕರ್ಕಂಬಕೆ ಏನೂ ತೊಂದರೆ ಇಲ್ಲೆ. ಎಲ್ಯಾರ್ ತರಕಾರಿ ತಾಕೋ, ಇನ್ನ್ ಎಂತಾರ್ ಸಣ್ಣ ಕೆಲ್ಸಕ್ಕೋ ಹೊರಗೆ ಹೋಕನ ಪಿಳ್ಳೆನ ನನ್ನೊಟ್ಟಿಗೆ ಬುಟ್ಟ್ ಮನೆಗೆ ಬೀಗ ಹಾಕಂಡ್ ಹೋದೆ. ಅಂತೂ ಬೆಂಗ್ಳೂರಿಗೆ ಬಂದ್ ಹಂಞಾ ದಿನಲೇ ಊರ್‌ನ ಮನೆ ನೆನ್ಪಾಕೆ ಸುರಾತ್. ಅಲ್ಲಿನ ದನಕರ್‌ಗ, ಹಂದಿಕೋಳಿಗ, ಗಂಡ ಏನ್ ಮಾಡುವೆನೋಂತ ಗ್ರೇಸಿಕೆ ಆತ್.

ಆ ದಿನ ಜಗ್ಗ ಏನೋ ಅಪೂರ್ಪಕ್ಕೆ ಆಫೀಸ್‌ಂದ ಹಂಞಾ ಬೇಗ ಬಾತ್. ಹಂಗೆ ಹಿಂಬೊತ್ತ್‌ನ ಕಾಪಿ ಕುಡ್ಕಂಡ್ ಇರ್ಕನ ಅಪ್ಪ ಯಾಗೊಳು ಬಿಜ್ಜಿನಾ ಅಮ್ಮಾ? ರಾಜಕೀಯ, ಸಮಾಜದ ಕೆಲ್ಸಂತ ಸುತ್ತಿಕಂಡೇ ಇದ್ದವೆನಾಂತ ಕೇಳ್ತ್. ಹೌದು ಹಂಗೆನೇಂತ ಹೇಳಕ್ಕ್. ಅವುಕ್ಕೆ ಅದರ್ಲಿ ಸಂತೋಸ ಉಟ್ಟು. ಕುಸೀನ ಕೆಲ್ಸಂತ ಇರ್ಕನ ನಾ ಯಾಕೆ ಅಡ್ಡಿ ಮಾಡೊಕೂಂತ ಸುಮ್ಮನೆ ಒಳೇಂತ ಕಾವೇರಮ್ಮ ಹೇಳ್ದೊ. 'ಅಮ್ಮಾ..... ನಾ ನಿನ್ನೊಟ್ಟಿಗೆ ಹಂಞಾ ಮಾತಾಡಿಕೆ ಉಟ್ಟುಂತೇಳಿಯೆ ನಿನ್ನ ಬಾಕೆ ಒತ್ತಾಯ ಮಾಡ್ದ್. ಈಗ ಕೂಸು ಅನಘ ಮೊಲೆ ತಿಂಬೊದು ಬುಟ್ಟುಟ್ಟು. ನಿನ್ನ ಸೊಸೆನ ಕೆಲ್ಸಕ್ಕೆ ಕರಿತಾ ಒಳೊ. ಇನ್ನ್ ಹೆಚ್ಚ್ ದಿನ ರಜೆ ಕೊಡಿಕೆ ಆಲೆ. ಕೆಲ್ಸ ಬೇಕರೆ ಬೇಗ ಕೆಲ್ಸಕ್ಕೆ ಬರೊಕು. ಇಲ್ಲರೆ ಬೇರೆ ಜನ ತಕಂಡವೇಂತ ಹೇಳ್ತಾ ಒಳೊ. ಅದ್ ಹೆರಿಗೆ ರಜೆ ಮಾಡಿ ವರ್ಸ ಆತಲ. ಇನ್ನ್ ಎಸ್ಟ್ ರಜೆ ಕೊಟ್ಟವೆ. ಒಳ್ಳೆ ಕೆಲ್ಸ. ಇಪ್ಪತ್ತೈದ್ ಮೂವತ್ತು ಸಾವಿರ ಸಂಬಳ ಉಟ್ಟು. ಈ ಬೆಂಗ್ಳೂರ್‌ಲಿ ಜೀವನ ಮಾಡ್ದು ಎಸ್ಟ್ ಕಸ್ಟ ಗೊತ್ತುಟಾ? ದುಡ್ಡು ಇಲ್ಲದೆ ಯಾವ ಕೆಲ್ಸನೂ ಆಲೆ. ಒಣಗಿದ ಬಜೆಂಟಿಗೂ ದುಡ್ಡು ಕೊಡೊಕು. ಮುಂದೆ ಕೂಸುನ ಓದ್ಸೋಕು. ನರ್ಸರಿಗೆ ಲಕ್ಷಗಟ್ಲೆ ಫೀಸ್ ಆದೆ. ಒಬ್ಬನ ಸಂಬಳಲಿ ಇಲ್ಲಿ ಬೊದ್‌ಕಿಕೇ ಬೊತ್ತ್. ನಿನ್ನ ಸೊಸೆನ ಕೆಲ್ಸಕ್ಕೆ ಕಳ್ಸದೆ ಬೇರೆ ದಾರಿ ಇಲ್ಲೆ. ಏನ್ ಮಾಡ್ದೂಂತ ಮಂಡೆ ಬೆಚ್ಚ ಸುರಾಗುಟ್ಟು. ನೀ ಏನ್ ಹೇಳಿಯಮ್ಮಾಂತ ಕೇಳ್ತ್.

'ಹೂಂ. ನೀ ಹೇಳ್ದನೋ ಸರಿಯೇ. ಇಲ್ಲಿ ಒಣಗಿದ ದರ್ಗಿಗೂ ದುಡ್ಡು ಕೊಡದೆ ಸಿಕುಲೆ. ಬೆಂಗ್ಳೂರುಲಿ ಇರ್ದೂಂತ ಊರ್‌ಲಿ ಇದ್ದುವುಕೆ ಹೇಳಿಕೆ

ಲಾಯಕ್. ಇಲ್ಲಿ ಇದ್ದವರ ಕಸ್ಟ ಅವುಕೇ ಗೊತ್ತು. ದುಡ್ಡು ಎಸ್ಟಿದ್ದರೂ ಸಾಲ್ದ್'!

'ಅದೇ ಅಮ್ಮ ಇರ್ದು. ನಿನ್ನ ಸೊಸೆನ ಕೆಲ್ಸಕ್ಕೆ ಕಳ್ಸೊಕು ತಾನೇ? ಮನೇಲಿ ಕೂಸುನ ನೋಡಿಕಂಬುವು ಆಕು. ಕೂಸುನ ನೋಡಿಕಂಬ ಅಜ್ಜಿಕಳೋ, ಗೂಡೆಗಳೋ ಸಿಕ್ಕುದು ಕಸ್ಟ. ಇಲ್ಲಿ 'ಡೇ ಕೇರ್'ಂತ ಮಕ್ಕಳ ಹಾಕಂಬ ಜಾಗೆಗ ಏನೋ ಒಳೋ. ಆದರೆ ಅಲ್ಲಿಮೆನಿ ಹಾಕಿರೆ ಕೂಸುನ ಹೇಂಗೆ ನೋಡಿಕಂಡವೇಂತ ಏನ್ ಗೊತ್ತು. ಹಾಲ್‌ಲಿ ನಿದ್ರೆ ಮೊದ್ದು ಹಾಕಿ ಮಕ್ಕಳ ಮಲಗ್ಸಿ, ಅವು ಅವರ ಕೆಲ್ಸ ಮಾಡಿಕಂಡೆ ಇದ್ದವೇತನೂ ಹೇಳುವೆ. ಈಗನ ಕಾಲಲಿ ಯಾರ್ನ ನಂಬುದು ಹೇಳಿ. ಅದಕ್ಕೆ ಅನಘ ದೊಡ್ಡಂವ ಆಕನ ಮುಟ್ಟ ನಿಂಗೆ ಇಲ್ಲಿ ಇರಿಕೆ ಆದೊ? ಅಪ್ಪ ಹೇಂಗೂ ರಾಜಕೀಯ, ಸಮಾಜ ಸೇವೇಂತ ಸುತ್ತಿಕಂಡೇ ಇದ್ದವೇ'ಂತ ಹೇಳ್ಕನ ವಾಕ್..... ಕ್..... ಕ್..... ಕುಡ್ಕಂಡ್ ಇದ್ದ ಚಾ ಸೆರೆ ಹತ್ತಿ ಕಣ್ಣ್‌ಲಿ ನೀರ್ ಬಾತ್ ಕಾವೇರಮ್ಮಂಗೆ. ತಟ ಪಟಾಂತ ನೆತ್ತಿಗೆ ಹೊಡ್ಕಂಡ್ ವಾಶ್ ಬೇಸಿನಿನ ಹಕ್ಕಲೆ ಹೋಗಿ ಮೋರೆ, ಕಣ್ಣ್ ಎಲ್ಲಾ ತೊಳ್ದ್ ಬಂದರೂ ಹಂಞ ಸೆರಿ ಆದಾಂಗೆ ಆದರೂ ಕಣ್ಣ್ ಲಿ ಮೂಕುಲಿ ನೀರ್ ಅರ್ಕಂಡೇ ಇತ್ತ್. ಅಸ್ಟ್ ಹೊತ್ತಿಗೆ ಕೂಸ್‌ನ ಮೀಸಿಕಂಡ್ ಬಂದ ಸೊಸೆ ಗಂಡನ ಕರ್ದ್ ಏನೋ ಕೆಲ್ಸ ಹೇಳ್ತೋ ಕಂಡದೆ ಇಬ್ರೂರು ಕುಸುಕುಸು ಮಾತಾಡಿಕಂಡ್ ಇದ್ದೊ.

ಮರ್ದಿನ ಹೊತಾರೆ ಎದ್ದ ಕಾವೇರಮ್ಮ ಏನ್ ಮಂಜಂಗೆ ಉತ್ತರ ಹೇಳ್ದು? ಅತ್ತ ಉಗಿಯಕೂ ಅಲ್ಲ ಇತ್ತ ನುಂಗಿಕೂ ಅಲ್ಲದ ಉಭಯ ಸಂಕಟ. ಊರ್ನ ಮನೆ ಮಾರ್, ತೋಟ ತೊಡಿಗೆ ದನಕರುಗಳ ಎಲ್ಲಾ ಬುಟ್ಟ್ ನಾ ಪೇಟೆಲಿ ಇದ್ದರೆ ಅಲ್ಲಿ ಹೇಂಗಾದು? ಈ ಪ್ರಾಯಲಿ ಗಂಡನ ಒಬ್ಬನೇ ಬುಟ್ಟ್ ಇರ್ದು ಸೆರಿನೋ ಧರ್ಮನೊಂತ ಪೇಚಾಡಿಕಂಡ್ ಇದ್ದೊ. ಅಷ್ಟೊತ್ತಿಗೆ ಮಂಜಂಗೆ ಫೋನ್ ಬಾತ್. ಆಚೆಮನೆ ಕಾರ್ಯಪ್ಪ ಫೋನ್ ಮಾಡ್ದಾಂಗೆ ಇತ್ತ್. ಕಾರ್ಯಪ್ಪ ಜಗ್ಗಂಗೆ 'ನಿನ್ನ ಅಪ್ಪ ನಿನ್ನೆ ರಾತ್ರೆ ಸ್ಕೂಟರ್ಲಿ ಬಾಕನ ಸಡನ್ ಲಾರಿ ಅಡ್ಡ ಬಂದರ್‌ಂದ ತಪ್ಪ್‌ಸಿಕೆ ಚರಂಡಿಗೆ ಇಳ್ಸಿ ಬಿದ್ದ್ ಕಾಲ್ ಪ್ರ್ಯಾಕ್ಚರ್ ಆಗುಟ್ಟು. ಆಸ್ಪತ್ರೆಗೆ ಸೇರ್ಸಿ ಆಗುಟ್ಟು. ಒಂದು ವಾರ ಆಸ್ಪತ್ರೆಲಿ ಇರೊಕಾದೂಂತ ಡಾಕ್ಟ್ರ ಹೇಳುವೆ. ಮನೆಗೆ ಬಂದರೂ ಒಂದೆರೆಡ್ ತಿಂಗ ರೆಸ್ಟ್ ಬೇಕಾದುಗಡ'ಂತ ಹೇಳ್ದರ ಕೇಳಿ ಮಂಜನ ಮೋರೆ ಚಪ್ಪೆ ಆತ್. ಅರ್ಧಂಬರ್ಧ ಕೇಳಿಕಂಡ್ ಇದ್ದ ಕಾವೇರಮ್ಮಂಗೆ ಮಂಜ ಎಲ್ಲಾ ಹೇಳ್ತ್. ವಿಸಯ ಗೊತ್ತಾಗಿ ಕಾವೇರಮ್ಮ ಕಣ್ಣೀರ್ ಸುರ್ಸಿಕಂಡ್, ಸಿಕ್ಕಿದ ಬಟ್ಟೆಬರೆ ಚೀಲಕ್ಕೆ ತುರ್ಕಿಕಂಡ್ ಗಡಿಬಿಡಿಲಿ ಬಸ್ ಹತ್ತಿದೊ.

✍ಪಿ. ಜಿ. ಅಂಬೆಕಲ್

# ಎರಡ್ ಕಾಗದಗ

"ಕಾವೇರೀ, ಬಾ, ತಕ; ನಿಂಗೊಂದ್ ಕಾಗದ ಬಂದುಟು"ಂತೇಳಿ ಪೇಟೆಂದ ಆಗ ತಾನೆ ಬಂದ ಆನಂದನೊವು ಹಾಕಂಡಿದ್ದ ಶರ್ಟ್‌ನ ಕಳ್ಸ್‌ತ್ತಾ ಪತ್ರನ ಹೆಂಣ್‌ನ ಕೈಗೆ ಕೊಟ್ಟೊ. ಒಟ್ಟಿಗೆ, 'ಯಾರಪ್ಪ ನಿಂಗೆ ಈ ಕಾಲಲಿ ಕಾಗದ ಬರ್‍ಯೊವು, ಈಗ ನಿನ್ನ ಎಲ್ಲಾ ಕಾರ್‌ಬಾರ್‌ಗೆ ಮೊಬೈಲ್‌ಲೇ ತಾನೆ!'ಂತ ಹಂಞಾ ಕೊಂಕ್‌ನೂ ಸೇರ್ಸಿದೊ. ಕಾವೇರಿ ಗಂಡಂಗೆ, 'ಎಂತೊವಪ್ಪ ನೀವು! ಮಗಳ ಅಕ್ಷರನೂ ಗೊತ್ತಾದ್ಲೆನೋ? ಮಾಯಾ ಬರ್‍ದುಟು. ನೀವ್ಗೆ ನೀವಾತ್, ನಿಮ್ಮ ತೋಟಾತ್'ಂತ ಪರಂಚಿಕಂಡೇ ಲಕೋಟೆನ ಒಡ್ತ್.

ಉದ್ದದ ಕಾಗದ! ಇಬ್ರೊರೂ ಒಟ್ಟಿಗೇ ಓದಿದೊ. ಮೊನ್ನೆ ಯಾಕೆ ಫೋನ್‌ಲಿ ಗೂಡೆ ಪುಟಿಪಿಟ್‌ಕ್ ಮಾಡ್ತ್‌ಲ್ಲೆಂತ ಕಾವೇರಿಗೆ ಒಂದಿಷ್ಟ್ ವ್ಯಥೆ; ಆನಂದನೊವು ತಬ್ಬಿಬ್ಬಾಗಿ ಎರಡ್ ಕೈಗಳ್ನೂ ತಲೆ ಮೇಲೆ ಹೊತ್ತ್‌ಕಂಡೊ. ಇಬ್ರೊರೂ ಗರಬೊಡ್ಡವರಾಂಗೆ ಅಂಗಳಲಿ ಕುದ್ದಲೇ ಕುದ್ದ್‌ಕಂಡೊ.

ಹಿಂಬೊತ್ತ್‌ನ ಸರ್ವಿಸ್ ಬಸ್ ಹಿಡ್ದ್ ಕಾಲೇಜ್‌ಂದ ಬಂದ ಸಣ್ಣ ಮಗ ಛಾಯಾ ಉಲ್ಲಾಸಲಿ ಕೊಣ್ಕಂಡ್ ಅಂಗಳ ಸೇರ್‌ಕನ, ಕತ್ತಲಾಕೆ ಕಾಯ್ತ್ತಿರ್‌ವ ಗುಮ್ಮಗಳಾಂಗೆ, ಸುಮ್ಮಂಗೆ ಕುದ್ದ್‌ಕಂಡಿದ್ದ ಪೊಪ್ಪ ಅವ್ವನ ನೋಡಿ, ಆಗಾಗ ಇವರೊಳಗೆ ನಡಿವ 'ಕೋಳಿ ಜಗಳ' ಇಂದೂ ನಡ್ದಿರೊಕುಂತ ಗ್ರೈಸಿತ್; 'ಇವರ ಹಂಞಾ ರಾಜಿ ಮಾಡ್ಸಿನೆ'ಂತ ಕಾಫಿ ಮಾಡಿ ತಾಕೆ ಮನೆ ಒಳಗೆ ಓಡ್ತ್.

ದೊಡ್ಡ ಮಗ ಮಾಯಾಂಗೆ ಮೊದ್ವೆ ಮಾಡಿ ಗಂಡ ಮೋಹನನೊಟ್ಟಿಗೆ ದುಬೈಗೆ ಕಳ್ಸಿಕೊಟ್ಟ್ ಮೂರ್ ವರ್ಷನೇ ಆತ್. ಹೋದ ವರ್ಷ ಒಂದ್ ವಾರದ ಮಟ್ಟ್‌ಗೆ ಇಬ್ರೋರೂ ಬಂದಿದ್ದೊ. ಮಾಯಾಂಗೆ ಅವ್ವಂತೇಳ್ರೆ ಪಂಚಪ್ರಾಣ, ಎಲ್ಲಿಲ್ಲದ ಪ್ರೀತಿ. ಪೊಪ್ಪನೊಟ್ಟಿಗೆ ಭಯ-ಭಕ್ತಿ ಅಷ್ಟೇ ಇದ್ದರೂ ತಂಗೆ ಛಾಯಾ, ಈಗ ಡಿಗ್ರಿಗೆ ಬಂದರೂ, ಪೊಪ್ಪನ ತೊಬ್ಬಿ ಹಿಡ್ದ್ ಜೋತ್‌ಬೀಳ್‌ವಂತ ಸಲ್‌ಗೆ ಇಲ್ಲೆ. ಛಾಯಾಂಗೆ ಪೊಪ್ಪ ಸ್ನೇಹಿತ ಇದ್ದಾಂಗೆ – ಊರ್‌ನ ಕತೆಗ, ಹಾಳ್‌ಹರ್‍ಟೆಗ, ಕೀಟ್ಲೆಗ ಎಲ್ಲಾ ಅವರೊಟ್ಟಿಗೆ!

'ಅಕ್ಕನ ಕಾಗದ ಬಂದುಟು, ನೀನೂ ಓದಿನೋಡ್'ಂತ ಪತ್ರನ ಛಾಯಾಂಗೆ ಕೊಟ್ಟೊ. ಮಾಯ ಬರ್‍ದಿತ್ತ್. "…. ಅವ್ವಾ, ಪೊಪ್ಪನೂ ನೀನೂ ನನ್ನ ಮೊದ್ವೆಗೆ ಹುಡ್ಗನ ಮನೆವ್ಕೆ ವರದಕ್ಷಿಣೆ (ಡೌರಿ) ಕೊಟ್ಟದ್ ಈಗ ನನ್ನ ಗಂಟಲ್‌ಗೆ ಉರ್‌ಳಾಗಿ ಕುದ್ದುಟು. ಡೌರಿ ಕೇಳ್‌ಕನನೇ ಅವು ಎಷ್ಟ್ ಕೀಳ್ ಬುದ್ಧಿಯೊವುಂತ

ನೀವ್ಗೆ ಯಾಕೆ ಅರ್ಥ ಆತ್‌ಲ್ಲೆ? ಮೊದ್ವೆ ಆಗಿ ಮೂರ್ ವರ್ಷ ಕಳ್ದರೂ ಅವರ್ಲಿ ಯಾರಿಗೂ ನನ್ನೊಟ್ಟಿಗೆ ಒಂದೇ ಒಂದ್‌ನೂ ಪ್ರೀತಿನ ಮಾತ್ ಇಲ್ಲೆ. ಅವ್ಕೆ ಬೇಕಾದ್ ನಾ ದುಡಿವ ಸಂಬಳ, ನಮ್ಮಿಂದ ಇನ್ನೂ ಹಣ! ಎರಡ್ ತಿಂಗಳ ಹಿಂದೆ ಅತ್ತೆನೂ ಮಾಂವನೂ ಎರ್‍ಡ್ ವಾರಕ್ಕೆಂತ ಇಲ್ಲಿಗೆ ಬಂದಿದ್ದೊ. ಇದ್ದಷ್ಟೆ ದಿನ, 'ಆನಂದ ಮೊದ್ವೆಲಿ ಏನ್ ಮಹಾ ಕೊಟ್ಟತ್? ಅಳಿಯಂಗೆಂತ ಒಂದ್ ಸೈಟ್‌ನ ಕೊಡುವ ಯೋಗ್ಯತೆ ಇಲ್ಲದಂವ'ಂತ ನಂಗೆ ಕೇಳ್ಳೊಕುಂತ ಗಟ್ಟಿಯಾಗಿನೇ ಅವರ ಮಂಜನ ಕೆಬಿ ಉರ್‍ಗ್ತತ್ತನೇ ಇದ್ದೊ. ನೆತ್ತಿವರೆಗೆ ತಿಂದ್ ಬಾಯ್ತುಂಬ ನಾವ್ಗೆ ಶಾಪ ಹಾಕಿ ಹೊರ್‍ಟ್ಟೊ. ಅಲ್ಲಿಗೂ ನಂಗೆ ಕಿರಿಕಿರಿ ತಪ್ಪಿತ್‌ಲ್ಲೆ. ಮೈಸೂರ್ಲಿ 40' x 60' ನ ಒಂದ್ ಸೈಟ್‌ನ ಕೊಟ್ಟೇ ಕೊಡೊಕುಂತ ಸ್ವಾಭಿಮಾನ ಇಲ್ಲದ ನನ್ನ ಗಂಡನ ರಾಗ ಹೆಚ್ಚ್‌ತ್ತನೇ ಉಟ್ಟು. ಇದೇ ದಿನನಿತ್ಯದ ಜಗಳಕ್ಕೆ ಕಾರಣ ಆಗುಟು. ಯಾದೇ ಕಾರ್‍ಣಕ್ಕೂ ಖಂಡಿತಾ ಇಂತ ದುರಾಸೆನ ಅಯೋಗ್ಯರ ಒತ್ತಡಕ್ಕೆ ಬೊಲಿ ಆಗ್‌ಬೊಡಿಂತ ತಿಳ್ಸಿಕೆ ಈ ಕಾಗದನ ಬರೀತ ಒಳೆ. ಡೌರಿ ಅವರ ಜನ್ಮಸಿದ್ಧ ಹಕ್ಕ್‌ಂತೇಳ್ವ ಧೋರಣೆನೊವು!"

ಕಾವೇರಿ ನೆಡುಲಿ ಬಾಯಿ ಹಾಕಿತ್: 'ನಮ್ಮಂದಾಗಿ ಮಾಯಾನ ಬೊದ್ಕೇ ಹಾಳಾಗ್‌ತ್ತುಟ್ಟು. ಇಲ್ಲಿ ಎಷ್ಟೋ ಯೋಗ್ಯ ಗೃಹಸ್ಥರ ಕುಟುಂಬಗ ಒಳೊ. ಒಂದೆರಡ್ ಪ್ರಸಾಪಗಸ ಬಂದಿದ್ದೊ. ನಮ್ಮ ದುರಾದೃಷ್ಟಕ್ಕೆ ನಾವ್ಗೆ ಇವು ಗಂಟ್‌ಬಿದ್ದೊ: ಇವರಂತ ಮೂರ್ ನಾಲ್ಕ್ ಡೌರಿಗಾಗಿ ಬಾಯಿಬುಡ್‌ವ ಮನೆಗಳ್‌ಂದಾಗಿ ಸಮಾಜಕ್ಕೇ ಕೆಟ್ಟ ಹೆಸರ್'.

ಅರ್ಥ ಓದಿದರ ಛಾಯಾ ಮುಂದರ್‍ಸಿತ್: "...ಇನ್ನ್ ಛಾಯಾನ ವಿಷಯ: ಈಗ ನೀವು ತಂಗೆಗೂ ಹುಡ್ಗನ ಹುಡ್ಕ್‌ತ್ತೊಳರಿಂತ ಆಗಾಗ ಹೇಳಿರೆ. ಪಾಪ, ಅದ್ ಇನ್ನೂ ಸಣ್ಣದ್, ಯಾಕೆ ಇಷ್ಟೊಂದ್ ಅಂಬೆರ್ಪು ಮಾಡಿರೆ? ನನ್ನ ಮೊದ್ವೆಲಿ ಮಾಡ್ದ ತೊಪ್ಪುನ ದಮ್ಮಯ್ಯ ಇನ್ನೊಮ್ಮೆ ಮಾಡ್ಬೊಡಿ. ಕಟ್‌ಕನ ಕತ್ತಿನ ಬಾಯಿಗೆ ಕುರಿನ ದೂಡ್ಬೊಡಿ".

ಕಾಗದ ಓದಿ ಮುಗ್ಸ್‌ಕನ ಛಾಯಾನ ಕಣ್ಣ್‌ಗ ತೇವ ಆಗಿದ್ದೊ. ಅಕ್ಕನ ಮೇಲೆ ಗೌರವ ಇನ್ನಷ್ಟ್ ಹೆಚ್ಚಿತ್; ಮನ್ಸ್‌ಲೇ ಹೇಳಿಕಂಡತ್: 'ಅಕ್ಕ, ಎಂದ್‌ಗೂ ನಾ ನಿನ್ನ ಬುಟ್ಟ್ ಹಾಕಿಕಿಲ್ಲೆ'.

ಆನಂದನೊವು ಛಾಯಾಂಗೆ, 'ಕತ್ತಲೆ ಆಗ್ತಾ ಉಟ್ಟು, ಹೋಗ್ ಒಳಗೆ ಲೈಟ್ ಹಾಕ್; ಇಲ್ಲಿ ಚೊಳ್ಳೆಗಳ (ಸೊಳ್ಳೆಗಳ) ಕಾಟ'ಂತ ಹೇಳಿ ಎದ್ದ್ ಹೊರ್‍ಟ್ಟೊ. 'ಮೋಹನ ಭಾವ ನಮ್ಮ ರಕ್ತ ಹೀರ್‍ದು ಸಾಲ್ದ್‌ಂತ ಚೊಳ್ಳೆಗ ಕೂಡಾ ಸುರು ಮಾಡ್ದೊ'ಂತ ಬೊಯ್ಕಂಡೇ ಲೈಟ್ ಹಾಕಿಕೆ ಛಾಯಾ ಓಡ್ತ್.

ರಾತ್ರೆನ ಊಟಕ್ಕೆ ಟೇಬ್ಲ್‌ನ ಸುತ್ತ ಕುದ್ದೊ. ಉಂಬಕೆ ಮುಂದೆ ಒಮ್ಮೊಮ್ಮೆ ಒಂದ್ 'ಪೆಗ್' ಹಾಕಂಬೊದು ಆನಂದನವರ ಅಭ್ಯಾಸ. ಇಂದ್ ಎರಡ್ ಪೆಗ್ ಹಾಕಂಡೊ – ದುಃಖ ಕಳ್ಯಕೆ ಜೋರ್‌ನ ನಿದ್ದೆ ಬರ್ಲಿಂತ ಇರೊಕು. ಅವರ 'ಸ್ಪಿರಿಟ್' ಹಿಂಬೊತ್ತೇ ಅಂಗಳಲಿ ಆವಿ ಆಗಿತ್ತ್; ಆಸೆಪಟ್ಟ ನಿದ್ದೆ ಹತ್ರನೂ ಸುಳ್ತ್‌ಲ್ಲೆ! ತಿಳ್ದೊ ತಿಳ್ಯದೆನೊ ತನ್ನಂದ ಆದ ಅಪರಾಧ ಪೂರ್ತಿ ಹಿಂಡಿಹಾಕಿತ್ತ್.

ಮಾತ್ ಸುರುಮಾಡಿ ಆನಂದನೊವು ಛಾಯಾನೊಟ್ಟಿಗೆ, "ಮಗಳೆ, ನಮ್ಮ ತಾತ, ಮುತ್ತಾತರ ಕಾಲಂದಳೂ ಕನ್ಯಾಶುಲ್ಕ / ತೆರವು, ವರದಕ್ಷಿಣೆಗ ನಡ್ದ್ ಬಂದ ಪದ್ಧತಿ. ಮೊದುವೆ ಸಮಯಲಿ ಕೊಟ್ಟ ಡೌರಿನ ತಕಂಡ್ ತೃಪ್ತಿ ಪಡ್‌ವ ಬದಲ್ ಕೆಲೊವು ಅಯೋಗ್ಯರ್ ಮಾನ ಮೊರ್‍ಯಾದೆನ ಬುಟ್ಟ್ ಗೂಡೆನ ಕಡೆಂದ ಬಂದಷ್ಟ್ ಬರ್ಲಿಂತ ಎಲ್ಲಾ ತರಲಿ ಆಮೇಲೆನೂ ಹಿಂಸೆ ಕೊಟ್ಟವೆ. ಅದ್ಕೇ ತಾನೆ, 'ಜಾಮಾತೋ ದಶಮ ಗ್ರಹ'ಂತ ಮಾತ್ ವಾಡಿಕೆಲಿ ಇರ್ದು. ಅಳಿಯ ಹತ್ನೇ ಗ್ರಹದ್ಹಾಂಗೆ ಪೀಡ್ಸ್‌ತ್ತನೇ ಇದ್ದದೆ".

ಇನ್ನೂ ಸಬೂಬ್ ಹೇಳಿಕೆಂತ ಬಾಯಿ ತೆಗ್ಯಕನ ಛಾಯಾಂಗೆ ವಿಪರೀತ ಸಿಟ್ಟ್ ಬಾತ್: 'ಪೊಪ್ಪ, ಸುಮ್ಮಂಗೆ ಮಾತ್ ತೇಲ್ಸಿ ತೊಪ್ಪ್‌ಸ್‌ಕೆ ನೋಡ್ಬೊಡಿ. ನೀವು ಡೌರಿ ಕೊಟ್ಟದೇ ಎಲ್ಲಾ ಈ ತೊಂದರೆಗಳ್‌ಗೆ ಮೂಲ ಕಾರಣ. ಮನೆಂದ ಮಗಳ್‌ಗೆ ಮಮತೆಲಿ ಕೊಡುವ ಸವಲತ್ತ್, ಬಳ್‌ವಳಿಗ ವರದಕ್ಷಿಣೆ ಆದುಲಲೆ; ಅದ್ ಹಿರಿಯೊವ್ಕೆ ತೃಪ್ತಿತರ್‌ವಂತದ್. ಆದರೆ, ಗಂಡ್‌ನ ಕಡೆವು ವಸೂಲ್ ಮಾಡ್‌ವಂತದ್ ದರೋಡೆ ಆದೆ– ಹಗಲ್ ದರೋಡೆ! ಅದ್ ವರದಕ್ಷಿಣೆ ಅಲ್ಲ, 'ವರಭಿಕ್ಷೆ'. ನೀವು ಭಾವನ ಕಡೆಯವರ ಮಂಜಣೆ ಮಾತ್‌ಗೆ ಮೋಸ ಹೋದರಿ. ಅವ್ಕೆ ಇರ್ದು ಬಡತನ ಅಲ್ಲ–ಭಂಡತನ!'

ಕಾವೇರಿ, 'ನಮ್ಮ ತೋಟದ ಕೆಲ್ಸದೊವು ಸ ದುಡ್ದ್ ಹೆಂಣ್‌ನ ಪೊರ್ಲ್‌ಲಿ ನೋಡಿಕಂಬಕೆ ಪ್ರಯತ್ನಪಟ್ಟವೆ.... ಸಾಕ್‌ಪ್ರಾಣಿಗಳ ಕೂಡ ನಾವು ಪ್ರೀತಿಸಿವೆ. ಅಷ್ಟ್ ಬೇಡಪ್ಪ – ಹಂಞ ಆದರೂ ಅತ್ತೆ ಮಾಂವನೊವು ಪ್ರೀತಿ ತೋರ್ಸ್‌ತ್ತಿದ್ದರೆ ಮಾಯಾ ಹೇಂಗಾರ್ ಸಂಸಾರ ನಡ್ಸಿಕಂಬೊತ್ತಿತ್ತ್'ಂತ ಹೇಳ್‌ತ್ತಾ ಸೀರೆನ ಸೆರಂಗ್‌ಲಿ ಕಣ್ಣೀರ್ ಒರ್ಸಿಕಂಡತ್. ಮಧ್ಯರಾತ್ರೆ ಕಳ್ತ್; ಮಾತ್ ನಿಲ್ಲ್‌ಸಿದೊ.

ಮಾಯಾಂಗೆ ಯಾವ ರೀತಿಲಿ ತಾಳ್ಮೆ ತಕಾಂತ ಬರಿದುಂತ ಗಂಡ ಹೆಣ್ಣ್ ಹಗಲ್ ರಾತ್ರೆ ಯೋಚ್‌ಸಿ ಒಕ್ಕಣೆಗಳ ಜೋಡ್ಸಿಕೆ ಎಂಟ್ – ಹತ್ತ್ ದಿನನೇ ಹಿಡ್ತ್. ಬರ್ದ ಕಾಗದನ ಟಪಾಲ್ ಮಾಡಿಕೆ ಮಾರ್‍ಣೆ ದಿನ ಆನಂದನೊವು ಪೇಟೆಗೆ ಹೊರ್‍ಟೊ, 'ಇದ್ಕೆ ಸ್ಟಾಂಪ್ ಎಷ್ಟಾದೆ'ಂತ ಕೇಳ್‌ತ್ತಿರ್‌ಕನ, 'ನಿಮ್ಮ ಮನೆಗೊಂದ್ ಕಾಗದ ಉಟ್ಟು'ಂತ ಟಪಾಲ್‌ನವನೇ ಬಂದಿದ್ದ ಕವರ್‌ನ ಕೊಟ್ಟತ್. ಈ ಸರ್ತಿ

ವಿಳಾಸನ ನೋಡ್‌ಕನನೇ ಮಾಯಾದ್‌ಂತ ಗೊತ್ತಾತ್–ಹೆಂಣ್‌ನ ಬಾಯ್‌ಂದ 'ಹರಕೆ' ಕೇಳ್ಸಿಕಂಬೊದು ತಪ್ಪಿತ್ತ್! ಹಗಲಿರ್‌ಳ್ ಕಷ್ಟಪಟ್ಟ್ ಬರ್ದಿದ್ದ ಪತ್ರನ ಮೊಡ್ಚಿ ಜೋಬಿಗೆ ಹಾಕಂಡೊ; ಈಗನ ಕಾಗದನನೂ ಓದಿದ ಮೇಲೆ ಪೋಸ್ಟ್ ಮಾಡೊನೊಂತ. ಮಾಯಾನ ಕಾಗದನ ಓದುವ ಕುತೂಹಲಲಿ ಆ ಕ್ಷಣನೇ ಹೊರ್ಟ್ ಆನಂದನೊವು ಜರೂರ್ಲಿ ಮನೆ ಸೇರ್‍ದೊ.

ಸಧ್ಯಕ್ಕೆ ಮಗಳ್‌ಂದ ಯಾವ ಕಷ್ಟದ ಸುದ್ದಿನೂ ಬರದಿರ್ಲಿಂತ ಕಾವೇರಿ ಜಪಿಸ್‌ತ್ತಿದ್ದ್‌ದ್ ವ್ಯರ್ಥ ಆಗಿತ್ತ್ ! ಈಗೊಳೂ ಪ್ರೀತಿನ ಅವ್ವಂಗೇ ಬರ್ದಿತ್ತ್. ಗಂಡ ಹೆಂಣ್ ಇಬ್ರೊರೂ (ಛಾಯಾ ಇಷ್ಟ್ ಬೇಗ ಕಾಲೇಜ್‌ಂದ ಬರಟಿಲ್ಲೆ) ಉಸ್‌ರ್ ಹಿಡ್ಕಂಡೇ ಓದಿದೊ. ಜಾಸ್ತಿ ಉದ್ದ ಇತ್ಲೆ; ಒಂದ್ ಪುಟನೂ ಭರ್ತಿ ಇಲ್ಲದ ಓಲೆ!

ಮಾಯ ಬರ್ದಿತ್ತ್ : '....ಅವ್ವಾ, ಆತ್ಮ ಗೌರವ ಕಾಪಾಡಿಕಣದ ಗಂಡನೊಟ್ಟಿಗೆ ಬೊದ್ಕಿಕೆ ನಾ ತಯಾರಿಲ್ಲೆ. ಕಾನೂನು ಪ್ರಕಾರ ಮೊದ್ವೆನ ರದ್ದ್‌ಪಡ್ಸಿಕೆ ಬೇಕಾದ ಕ್ರಮನ ನಾನೇ ಸುರುಮಾಡಿಯೊಳೆ. ಕೇಸ್ ಮುಗಿಯಕೆ ಸಮಯ ತಕಂಬೊದು; ಬೇರೆ ದಾರಿ ಇಲ್ಲೆ. ಗಂಡ ಮೋಹನಂದ ವಿವಾಹ ವಿಚ್ಛೇದನೆ ಎಷ್ಟ್ ಅಗತ್ಯನೋ ಅಷ್ಟೇ ಅಗತ್ಯ ನಂಗೆ ಆ ಅತ್ತೆ ಮಾಂವಂದರ್‌ಂದ ಬುಡ್‌ಗಡೆ ಸಿಕ್ಕಕಾದ್!

'ಮರುಭೂಮಿಲಿನೂ ನೀರ್ ಸಿಕ್ಕಿದೆಗಡ!..... ನಂಗೆ ಬೆಂಗ್ಳೂರ್‌ಲಿ ಕಂಪೆನಿ ಒಂದರ್ಲಿ ತಕ್ಕಮಟ್ಟಿಗೆನ ಒಳ್ಳೆ ಉದ್ಯೋಗ ಸಿಕ್ಕಿಟು; ಬರ್‌ವ ವಾರಲಿ ಸೇರೊಕು. ಕೆಲ್ಸಕ್ಕೆ ಸೇರಿಕೆ ಮುಂದೆ ಊರ್‌ಗೆ ಬಾವಸ್ಟ್ ಸಮಯ ಇಲ್ಲೆ. ನಿಮ್ಮಿಬ್ಬರ ಆಶೀರ್ವಾದದ ರಕ್ಷೆ ಎಂದೆಂದೂ ಕಾಪಾಡ್ದುಂತೇಳ್ವ ನಂಬಿಕೆ ನನ್ನದ್. ಎಲ್ಲಾ ವಿವರಗಳ ಛಾಯಾಂಗೆ ಫೋನ್‌ಲಿ ತಿಳ್ಸಿನೆ. ಅವ್ಳೇ ಪುರ್‌ಸೊತ್ತಾಕನ ನನ್ನಲ್ಲಿಗೆ ಬೆಂಗ್ಳೂರ್‌ಗೆ ಬರ್ಲೀಂತ ಹೇಳಿನೆ.

"ನೀವ್ಗೆ ಇನ್ನ್ ಇಳಿಪ್ರಾಯ. ಇದರೊಟ್ಟಿಗೆ ಇಬ್ರೊರೂ ಮಗಕ್ಕಳ ಭವಿಷ್ಯ ಏನಾದುಂತೇಳ್ವ ಕೊರಗ್ ಸೇರಿ ಖಂಡಿತಾ ನಿಮ್ಮ ಇನ್ನೂ ದಣ್ಸುದು ಸಹಜ; ಧೈರ್ಯ ತಕಣಿ. ಗೌರವಲಿ ಬೊದ್ಕುವ ಆತ್ಮವಿಶ್ವಾಸ ನಮ್ಮಿಬ್ಬರ್ಲೂ ಉಟ್ಟು; ಹೆದ್‌ರ್‌ಬೊಡಿ. ನಿಮ್ಮ ಜೀವನದ ಮುಸ್ಸಂಜೆಲಿ ಪ್ರೀತಿ, ಶ್ರದ್ಧೆಲಿ ಸೇವೆ ಮಾಡ್ದು ಛಾಯಾ ಹಾಂಗೂ ನನ್ನ ಸೌಭಾಗ್ಯಂತ ನಂಬಿರೊವು ನಾವು. ಇದೇ ನಮ್ಮಿಬ್ಬರ ನಿರ್ಧಾರ, ನಮ್ಮ ಗಟ್ಟಿ ನಿರ್ಧಾರ...."

✍ಮಾವಜಿ ರಾಮಣ್ಣ ಅಚ್ಯುತ

# ಸಣ್ಣಮ್ಮಜ್ಜಿ ಜಂಬರದ ಮನೆಗೆ ಹೋವುದರ ಬುಟ್ಟೊ

ಉಂಬಕೆ ಬಂದೊವೇ ಮೇಜ್ ಮೇಲೆ ಇಕ್ಕಿಸಿದ ಹುಗ್ಗೆ, ಗೈಪುನನೇ ಬೊಗ್ಗಿ ಬೊಗ್ಗಿ ಸಣ್ಣಮ್ಮಜ್ಜಿ ನೋಡ್ದೊ. ಕಣ್ಣುನೂ ಕಾಂಬೊದಿಲ್ಲೆ. ಕೆಬಿನೂ ಹಂಞಾ ಮಂದ. ಬೊಗ್ಗಿದ್ ಬಟ್ಲ್‌ನ ನೋಡಿವೆ. ಪಿಂಜಾಣಿಲಿ ಕುಡು, ಬಸಳೆ ಗೈಪು. ಅದರೆಡೆಲಿ ಒಂದೊಂದ್ ಹಲ್ಸಿನಕ್ಕಿನೂ ಇಣ್ಕ್‌ತಿತ್ತ್. ಬಟ್ಲ್‌ಲಿದ್ದ ಹುಗ್ಗೆ ಪುಡೆಲಿ ಕಾಸಿದ ಜೀಗುಜ್ಜೆನ ಪೋಡಿ ಐದಾರ್ ತುಂಡುನೂ ಇತ್ತ್. ಅಜ್ಜಿಗೆ ಬಾಳ ಕುಸಿ ಆತ್. ಕುಡು ಬಸಳೆ ಗೈಪೂಂತೇಳ್ರೆ ಅವ್ಕೆ ಸಣ್ಣದಿರಿಕನಂದಳೂ ಜೂವ. ಅವ್ವ, ದೊಡ್ಡ ಅಳಗೆ ತುಂಬಾ ಕುಡು, ಬಸಳೆ ಗೈಪು ಮಾಡಿ ಇಸ್‌ತಿದ್ದೊ. ಗೈಪುಗೆ ಅರ್‌ರುಬಿದ್ದ್ ಕೊದ್ಯೋದೇ ತಡ, ಅವು ಅವರ ಕುರ್ಚಟೆ ತಕಂಡ್, ಅದರ ತುಂಬಾ ಗೈಪುನ ಒಲೆ ಮೇಲೆಂದಳೇ, ಗೋಂಕ್ರ್ ಚಿಪ್ಪಿನ ಸೆಡೆಲಿ ಗೋಂಚಿ, ತಕಂಡ್ ಅಟ್ಟಕ್ಕೆ ಹತ್ತುವ ಕೇರ್ಪುನ ಅಡಿಲಿ ಕುದ್ದ್, ಉರ್‌ಗಿ ಉರ್‌ಗಿ ಗೈಪುಲಿದ್ದ ಬಸಳೆ ದಂಟ್‌ನ ಒಂದೊಂದೇ ತೆಗ್ದ್ ಬಿಸಿ ಬಿಸಿ ಇದ್ದದರ್‌ಂದ ಚೀಂಪಿ, ಅಗ್ದ್ ಅಗ್ದ್ ತಿಂಬೊತಿದ್ದೊ. ಬಸಳೆ ದಂಟ್ ತಿಂದ್ ಮುಗ್ಯಕಾಕನ ಕುರ್ಚಟೆಲಿದ್ದ ಗೈಪುನೂ ತಣ್ಕಂಡೇ ಬಾತಿತ್ತ್. ಆಹಾ! ಆ ಗೈಪುನ ರುಚಿನೇ ರುಚಿ. ಗೈಪುನ ತಿಂದ್‌ದ್ ಮುಗ್ದರೂ ಕುರ್ಚಟೆಲಿದ್ದ ಆಂಬರನ ಹಂಞನೂ ಬುಡದೆ, ನೆಕ್ಕಿ–ನೆಕ್ಕಿ ತಿಂಬೊತಿದ್ದೊ. ಇಂದ್ ಬಸಳೆ ಗೈಪುನ ನೋಡಿಕಾಕನ ಹಿಂದೆದೆಲ್ಲಾ ಅವ್ಕೆ ನೆಂಪಾತ್. ಹುಗ್ಗಗೆ ಆಂಬ್ರ ಹ್ಯೊಕಂಡ್ ಕಲ್ಸಿದ್, ಪುಂಡಿ ಕಟ್ಟಿ, ಒಂದು ಪುಂಡಿ ಹುಗ್ಗೆನ ಬಾಯಿಗೆ ಹಾಕಿದೊ. ಪ್ರೋರ್ಸ ಎಂಬತ್ತ್ ಆದರೂ ಅಗ್ಯಕೆ ಹಲ್ಲ್ ಗಟ್ಟಿ ಇತ್ತ್. ದಂಟ್‌ನ ಅಗ್ದ್ ಅಗ್ದ್ ತಿಂದೊ. ಊಟ ಪಸಂದ ಇತ್ತ್. ಅದರೆಡೆಲಿ ಕಾಸಿದ ಜೀಗುಜ್ಜೆ ಪೋಡಿನನೂ ನಂಜಿಕಂಡ್ ಉಂಡೊ. ಪೋಡಿಗೆ ಹಂಞ ಉಪ್ಪು, ಕಾರ ಹೆಚ್ಚಿಗೆ ಇದ್ದ್, ಉಂಬಕೆ ಲಾಯ್ಕಾತ್. ಅಬ್ಬಾ! ಹೊಟ್ಟೆ ತುಂಬಿತ್. ಹಕ್ಕಲೆ ಇದ್ದ ಒಂದು ಗ್ಲಾಸ್ ನೀರ್‌ನನೂ ಕುಡ್ದೊ. ಬಟ್ಲ್, ಪಿಂಜಾಣಿ, ಗ್ಲಾಸ್ ತಕಂಡ್ ಅಡ್ಗೆ ಕೋಣೆನ ಸಿಂಕ್ ಹಕ್ಕಲೆ ಹೋಗಿ ತೊಳ್ಯಕೆ ಇಸಿ ಬಟ್ಲ್‌ಲಿದ್ದ ಅಗ್ದ್‌ಬುಟ್ಟ ದಂಟ್‌ನ ಹಿಂಟೆನ, ಅಲ್ಲೆ ಪಕ್ಕಲಿಸಿಕಂಡಿದ್ದ ಕಸದ ಬುಟ್ಟಿಗೆ ಹಾಕಿ, ತೊಳ್ಯಕೆ ಸಿಂಕ್‌ನ ನೀರ್ನ ಬುಟ್ಟವೆ. ಹೊಟ್ಟೆಲಿ ತೊಳ್ಸಿಕಂಡಾಗಾತ್. ತಲೆನೂ ತಿರ್ಗಿಕೆ ಸುರಾತ್. "ಅರೆ ಇಂದ್ ನಂಗೇನಾತ್? ಹೊಟ್ಟೆಲಿ ತಳಮಳ ಸುರಾತಲೆ? ಇದೊಳ್ಳೆ ಗ್ರಾಚಾರ" ಎಂತ ನೆನ್ಸಿಕೊಂಡೊ. ಅವ್ಕೆ ತದ್ಯಕಾತ್ಲೆ.

"ಈಗ ನಾ ಕಕ್ಕುದು ಕಂಡಿತ"– ಎಂತ ಗ್ರೇಸಿಕಂಡ್, ತೊಳ್ಯಕೆ ಬುಟ್ಟ ನೀರ್‌ನ ನಿಲ್ಲಿಸಿ, ಬಾಯಿಗೆ ಕೈ ಓಡ್ಕಂಡ್ ಬೊಗ್ಗಿಕಂಡೇ ಉಂಬೊಳಗೆ ಇದ್ದ ಸಿಂಕ್‌ನ ಹಕ್ಕಲೆ ಓಡ್ದೊ. ಅಡ್ಗೆ ಕೋಣೆನ ಸಿಂಕ್‌ಲಿ ಬಾಯಿ ಮುಕ್ಕೈಸಿ ಉಗ್ದರೆ ಸೊಸೆ ಬೊಯ್ದದೆ.

"ಹಾಂ, ಇಲ್ಲಿ ಕಾಂಕ್ರಿಸಿ ಉಗ್ಯಬೊಡಿ. ಇದ್ ಅಡ್ಗೆ ಮಾಡುವ ಜಾಗೆ. ಮನಾರ ಇರೊಕು. ನೀವು ಉಂಬೊಳಗೆ ಇದ್ದ ಸಿಂಕ್‌ಲೇ ಕೈ ತೊಳ್ದ್‌ದ್ ಉಗ್ಯೆನಿ." – ಎಂತ ಅದ್ ಜೋರು ಮಾಡ್ತಿತ್ತ್. ಅದ್ ಹೇಳ್ದುನೂ ಸರಿ. ನಂಗೇನ್ ಗೊತ್ತುಟು? ಪೊಡ್‌ಂಬೆತಿ ನಾ. ಅದ್ ಕಲ್ತ ಗೂಡೆ. ಕಾಯ್ಲೆ ಬಾಕೆ ಮುಂದನೇ ಜಾಕ್ರತೆ ಮಾಡ್ದು ಒಳ್ಳೆದಲ್ಲನೋ?" – ಇದರೆಲ್ಲಾ ನೆನ್ನಿಕಂಡ್ ಸಣ್ಣಮ್ಮಜ್ಜಿ ಕೈ ತೊಳ್ಯವ ಸಿಂಕ್‌ನ ಹಕ್ಕಲೆ ಬಿರ್ಸ್‌ಲಿ ಹೋದವೆ. ಸಿಂಕ್ ಹಕ್ಕಲೆ ಮುಟ್ಟಿಕೆ ಮುಂದನೇ, "ವ್ಯಾಕ್" ಎಂತ ಬಾಯಿಂದ ಒಂದ್ ಮುಕ್ಕೈ ತಿಂದದ್ ಹೊರಗೆ ಬಾತ್. ಬಾಯಿಗೆ ಕೈ ಓಡ್ಡರುನೂ ಕೈ ತುಂಬಾ ಕಕ್ಕಿದ ಕಕ್ಕೇಲ್ ಕೈ ಮೀರಿ ಹಂಞ ನೆಲಕ್ಕೆ ಬೀತ್. ಓಡಿ ಹೋಗಿ ಸಿಂಕ್‌ಲಿ ಬೊಗ್ಗಿದ್ ಬಸ ಬಸಾಂತ ತಿಂದದೆಲ್ಲಾ ಕಕ್ಕುವೆ. ಕುಟ್ಟಿ, ಕುಟ್ಟಿ ಹೊಟ್ಟೆಲಿದ್ದದೆಲ್ಲಾ ಹೊರಗೆ ಬಾತ್. ಕಣ್ಣ್ ಕತ್ತಲೆ ಬಂದಾಂಗಾಗಿ ಬಿಸ್ರ್ ಬಾತ್. ಎಲ್ಲಾ ಕಕ್ಕಟನ ಉಗ್ದ್‌ದ್, ಬಾಯಿಗೆ – ಮೋರೆಗೆ ನೀರ್ ಹಾಕಿ ತೊಳ್ಕೊಂಡೊ. ಎರ್ಡ್ ಕಣ್ಣ್‌ಗೆನೂ ನೀರ್ನ ಚಿಪ್ಪುಸಿಕೊಂಡೊ. ಹೊಟ್ಟೆಲಿದ್ದದೆಲ್ಲಾ ಹೊರಗೆ ಬಂದ ಮೇಲೆ ಹಂಞ ಸಮ್ದಾನ ಆತ್. ಆದರೆ ಸರೀರನ ಬಸನೇ ಇಲ್ದಾಂಗಾತ್. ಸೊಸೆ ಇಜ್ಜೆಲ್‌ಲಿ ಒಣ್ಗಿಕೆ ಹಾಕಿದ ರಾಗಿಗೆ ಕೈ ಕೊಡ್ತಿತ್ತ್. ಅವು ಒಂದು ಸೀರೆ ತುಂಡುನ ತಕಂಡ್ ಬೇಕ ಬೇಕ ನೆಲಕೆ ಬಿದ್ದ ಕಕ್ಕಟನ ಒರ್ಸಿದೊ. ಸೀರೆ ತುಂಡುನ ಸಿಂಕ್‌ಲಿ ತೊಳ್ದ್‌ದ್ ತಿರ್ಗ ಒರ್ಸಿದೊ. ಹೀಂಗೆ ಐದಾರ್ ಸಲ ನೆಲ ಒರ್ಸಿ ಮನಾರ ಮಾಡ್ದೊ. ಸೊಸೆಗೆ ಗೊತ್ತಾದರೆ ಅದ್ ಬಂದ್ ಅತ್ತೆಗೆ ಬ್ಯೊಕಂಡೇ ಇದರೆಲ್ಲಾ ಮನಾರ ಮಾಡ್ತಿತ್ತ್. ಆದರೆ ಸಣ್ಣಮ್ಮಜ್ಜಿಗೆ ಕೈಂಪೆ ಬುಡೊಕೊಲೆ. ಸೊಸೆಗೆ ಗೊತ್ತಾಕೆ ಬೊತ್ತ್‌ಂತ ಅವರ ಇರಾದೆ. ಅಲ್ಲಿಂದವು ಅಡ್ಗೆ ಕೋಣೆಗೆ ಹೋಗಿ ಹೇಂಗೆ ಉಂಡ ಪಾತ್ರನ ತೊಳ್ದ್‌ದ್, ಮಡಿ ಅರ್ವೆಲಿ ಒರ್ಸಿದ್, ಅದರ ಇಸುವ ಜಾಗೆಲಿ ಇಸಿವೆನೋ, ಅವ್ಕೇ ಗೊತ್ತಿಲ್ಲೆ. ಬೇಕ ಬೇಕ ಬಂದ್ ಅವರ ಕೋಂಬ್ರೆಲಿ, ಮಂಚಲಿ ಹಾಸಿಗೆ ಹಾಸಿಕಂಡಿದ್ದರುನೂ, ನೆಲಲಿ ಬಿದ್ದ್‌ಕೊಂಡೊ. ಬೊಳ್ಪುಗೆ ಒರ್ಸಿದ ನೆಲ ಪಳ ಪಳ ಹೇಳ್ತಿತ್ತ್. ತಣ್ಣಂಗೆನೂ ಇತ್ತ್. ಮೊಲ್ಗಿದ್ ಒಂದೇ ಗೊತ್ತ್. ಇತ್ತನ ಗೋಚರ ಇಲ್ಲದಾಂಗೆ, ಅರ್ದ ಸಯನ, ಅರ್ದ ಎಚ್ಚರಲಿ ಮೊಲ್ಗಿದೊ. ಮಂಜ ರವಿ ಬಂದ್‌ದ್ ಬಾಕಿಲ್ ದೂಡಿಕನೇ ಅವ್ಕೆ ಎಚ್ಚರಾದ್. ಅಂವ,

"ಇದ್ಯಾಕೆ ಅವ್ವ, ನೀ ಹೀಂಗೆ ನೆಲಲಿ ಬಿದ್ದ್ ಕಂಡಳ? ಬರೆ ನೆಲಲಿ ಮೊಲ್ಗುದು ಒಳ್ಳೆದಲ್ಲ. ವಾತಗೀತ ಬಾದು." – ಅಂತ ಹೇಳ್ತ್.

ಅವು ಮಂಜಂಗೆ ಉತ್ತರ ಕೊಡುವ ಗೋಜಿಗೆ ಹೋಗದೆ, ಗೋಡೆಲಿದ್ದ ಗಡ್ಯಾರನ ನೋಡಿವೇ, ಆಗಳೇ ಗಂಟೆ ನಾಕಾಗಿತ್ತ್. ಮೆಲ್ಲಂಗೆ ಕೈ ಊರಿದ್ ಎದ್ದ್, ಹಾಸಿಗೆಲಿ ಬಿದ್ದ್‌ಕೊಂಡೊ.

ಮಂಜ ರವಿ ಅವರೊಟ್ಟಿಗೆ, "ಇಂದಾ ಅವ್ವ, ನಿನ್ನ ಕೆಂಪು ಜರಿ ಸೀರೆನ ಇಸ್ತ್ರಿ ಮಾಡಿ ತಂದಳೆ. ತಕಾ. ನಾಳೆ ಮೊದ್ವೆಗೆ ಹೋಕೊಲೆ" – ಅಂತ ಹೇಳ್ದೆ.

"ಇಲ್ಲೆ ಮಂಜ, ನಾ ನಾಳೆ ಮೊದುವೆಗೆ ಬಾದುಲ್ಲೆ. ನಂಗೆ ಸರೀರಲಿ ಬಸನೇ ಇಲ್ಲದಂಗಾದೆ. ಮದ್ಯಾನ ಉಂಡದೆಲ್ಲಾ ಕಕ್ಕಿ ಹೋತ್." – ಅಂತ ಸಣ್ಣಮ್ಮಜ್ಜಿ ಹೇಳ್ದೊ.

"ಹೌದವ್ವಾ? ಕಕ್ಕಿದನೋ? ಈಗ ಹೇಂಗುಟ್ಟು? ಡಾಕ್ಟ್ರಲ್ಲಿಗೆ ಹೋಕಾದೋ? ಹೇಂಗೆ?" – ಮಂಜ ರವಿ ಕೇಳ್ದೆ.

"ಬೇಡ ಮಂಜ. ಪಿರಾಯ ಆತಲೆ. ಇನ್ನ್ ಹೊಟ್ಟೆ ತುಂಬಾ ಉಂಬಕೆ ಆಗದ್. ಅರ್‍ಗೊಕೊಲೆ? ಮೊದ್ದ್ – ಗಿದ್ದ್ ಏನ್ ಬೇಡ. ನೀ ಸರ್‍ಸುಗೆ ಹೇಳ್, ನಂಗೆ ಹನೀಸ್ ಓಮನ ಓಡು ಕಸಾಯ ಮಾಡಿಕೊಡಲಿ. ಇರ್‍ಳ್ ಉಂಬೋದ್ಲೆ. ಬರೀ ರಾಗಿ ಬೋಳ ಮಾಡಿಕೊಡಿಕೆ ಹೇಳ್. ನಾಳೆಗೆ ಸರಿ ಆದು" – ಸಣ್ಣಮ್ಮಜ್ಜಿ ಮಂಜಂಗೆ ಹೇಳ್ದೊ.

"ಸರಿ ಅವ್ವ ಹಾಂಗೇ ಮಾಡ್. ಇನ್ನ್ ಪ್ರಾಯ ಹೋದ ಮೇಲೆ ಜಂಬರ, ಜಟ್ಟೀಂತ ತಿರ್‍ಗೋದರ ಬುಡು. ಹೋದಲ್ಲಿ ಅಡ್ಸರ ಬಡ್ಸರ ತಿಂದ್‌ದ್ ಕಕ್ಕಿ, ಉರ್‍ಚ್ಚಿರೆ ಜನ ನೆಗಾಡಿಕಾದು. ಇಂತಾ ಅಜ್ಜಿಕ ಎಲ್ಲಾ ಜಂಬರದ ಮನೆಗೆ ಏಕೆ ಬಾದು? ಅವ್ಕೆ ಬುದ್ಧಿ ಇಲ್ಲರೂ, ಅವರ ಮನೇವ್ಕಾದರೂ ಬುದ್ಧಿ ಬೇಡನೋ? – ಎಂತ ನನ್ನ ದೂರುವೊ."

"ಆತ್ ಬಲಾ. ನಂಗೆ ಅಸ್ಟುನು ಗೊತ್ತಾದ್ಲೆನೋ? ನಾ ಹೋದಲ್ಲಿ ತಿಂಬೋದು ಕಮ್ಮಿ. ಜಂಬರದ ಊಟ ನಂಗಾದ್ಲೆ. ನಿಂಗೆ ಕೆಟ್ಟ ಹೆಸ್ರ್ ನಾ ತಾಕಿಲ್ಲೆ ಬಲಾ?" ಸಣ್ಣಮ್ಮಜ್ಜಿ ರವಿಗೆ ಹೇಳ್ದೊ.

ರವಿ ಮಾತಾಡದೆ ಇಸ್ತ್ರಿ ಮಾಡ್ದ ಸೀರೆನ ಕಟ್ಟ್‌ನ ಅವ್ವನ ಕೋಣೆಲಿದ್ದ ಮೇಜಿನ ಮೇಲೆ ಇಸಿ, ಬಾಕಿಲ್ ಎಳ್ಕಂಡ್ ಹೊರ್‍ಟ್ಹೋತ್.

ಸಣ್ಣಮ್ಮಜ್ಜಿನ ತಲೆಲಿ ನೂರಾರ್ ಏಚನೆಗ. "ಅಲ್ಲ, ರವಿ ಹೇಳ್ದುನೂ ಸರಿ.

ಪ್ರಾಯ ಹೋದ ಮೇಲೆ ಸೊಂಟ ಬೊಗ್ಗಿಸಿಕಂಡ್, ಕೈ ಕಾಲ್ ದರ್ಪಿಕಂಡ್, ದೊಣ್ಣೆ ಊರಿಕಂಡ್ ಹೋದರೆ ನೋಡುವ ಜನ ಏನ್ ಹೇಳುವೊ?

ಕಳ್ದವೊರ್ಸ ಮಂಡೆಕೋಲ್‌ಲಿ ಕಳ್ಯಾಟಕ್ಕೆ ಹೋದ ಮಿಲಿಟ್ರಿ ರಾಂಪಣ್ಣ, ಅಲ್ಲಿ ಉಂಡ್ ತಿಂದ್, ಪೇಂಟ್‌ಲೇ ಉರ್ಚಿಕಾಕನ, ಸೇರ್ದ ಜನ ಎಲ್ಲಾ ತಲೆಗೊಂದೊಂದರಾಂಗೆ, ಬಾಯ್ಗೆ ಬಂದಾಂಗೆ ಮಾತಾಡ್ದೊಗಡ. ಜನಕ್ಕೇನ್? ತೋಳ ಹಳ್ಳಕ್ಕೆ ಬಿದ್ದರೆ ಆಳಿಂಗೊಂದ್ ಕಲ್ಲ್‌ಗಡ" ನಾಳೆ ನಾವೂನೂ ಅವರಾಂಗೆ ಪ್ರಾಯ ಸಂದೋವು ಆಗುವೋಂತ ಅವು ತಿಳ್ಯೋದುಲ್ಲೆ. ಪಾಪ! ರಾಂಪಣ್ಣಂಗೆ ಕೈ, ಕಾಲ್ ನಡ್ಗಿ ಪೇಂಟ್‌ನ ಬಿಚ್ಚಿಕುನೂ ಆತ್ಲೆ ಗಡ. ಕಡೆಗೆ ಪಾಪ – ಪುಣ್ಯ ತಿಳ್ದ ಕೆಲ ಹೈದಂಗ ಅವರ ಪರ್ದಾಟ ನೋಡಿಕಾಗದೆ, ಅವರ ಮೆಲ್ಲಂಗೆ ನೀರೆಡಿ ಕೊಟಗೆಗೆ ಕರ್ಕೊಂಡೋಗಿ, ಅವರ ಪೇಂಟ್‌ನ ಬಿಚ್ಚಿಸಿ, ಮೈ, ಕೈ ಮನಾರ ಮಾಡಿ, ಮಿಸಿ, ಯಾರ್ದೋ ಒಂದ್ ಕಂಬಾಯಿನ ಉಡ್ಸಿ, ಪೇಂಟ್‌ನ ಒಗ್ದದ್ ಒಣ್‌ಂಗಿಕೆ ಹಾಕಿದೊ ಗಡ. ಪೇಂಟ್ ಒಣ್‌ಂಗಿಕಾಕನ ಮುಟ್ಟ ಅವು ಕಂಬಾಯಿಲೇ, ಕೋಂಬ್ರೆ ಒಳಗೆ ಕುದ್ದ್‌ಕೊಂಡಿದ್ದೊ ಗಡ. ಇದರೆಲ್ಲಾ ಮನೆ ಕೆಲ್ಸಕ್ಕೆ ಬಾವ ಗೀತ ಗೂಡೆ, ಕೈ ಬಾಯಿ ಹಂದಾಡ್ಸಿ ಬಣ್ಣನೆ ಮಾಡ್ದರ ನೋಡ್ರೆ, ಏಕಪ್ಪಾ ಆ ರಾಂಪಣ್ಣ ಕಳ್ಯಾಟಕ್ಕೆ ಹೋಗಿ ಜನರ ಬಾಯಿಗೆ ಬಿದ್ದೋಂತ ಸಣ್ಣಮ್ಮಜ್ಜಿಗೆ ಬಾಳ ಬೇಜಾರಾಗಿತ್ತ್. ಅಂದ್ ಅವ್ಕಾದ ಕತೆ ನಾಳೆ ನಂಗೂನೂ ಆದು. ನಾ ಇನ್ನ್ ಮುಂದೆ ಜಂಬರದ ಮನೆಗೆ ಹೋವುದರ ನಿಲ್ಸೋಕೂಂತ ಮೊನ್ನ್‌ಲೇ ಗ್ರೇಸಿಕೊಂಡೊ. ಆದರೂ ಮೊನ್ನ್ ಕೇಳೊಕಲೆ?

"ಅಲ್ಲಾ ನನ್ನ ಅಣ್ಣನ ಮಂಜ ಮಹೇಶ ಮೊನ್ನೆ ಮೊದ್ವೆ ಹೇಳಿಕೆ ಕೊಡಿಕೆ ಬಾಕನ, ನನ್ನ ಕಾಲ್ ಹಿಡ್ಕಂಡ್ ಆಶೀರ್ವಾದ ಬೇಡಿಕಂಬಕನ, ನಾ ಎರ್ಡ್ ಕೈಲಿ ಅಂವನ ತಲೆ ಪೂಜಿ, ಎದ್ರಿಸಿಕನ, ಅಂವ ನನ್ನ ಎರ್ಡ್ ಕೈನ ಹಿಡ್ಕಂಡ್, ನಮ್ಮ ನೆಂಟ್ರ ಪೈಕಿ ಹಿರ್ಯೋವು ನೀವು. ನೀವ್ ಬಂದದ್ ನನ್ನ ಮಂಜಂಗೆ ಹರ್ಸೋಕು. ಎಂತ ಪಿರೀತಿಲಿ ಹೇಳಿಕಾಕನ, ನಾ ಬಾದುಲ್ಲೇಂತ ಹೇಳ್ದು ಹೇಂಗೆ"?

"ಅಲ್ಲ ಮಹೇಶ, ನಂಗೆ ವೊರ್ಸ ಎಂಬತ್ತಾತ್. ಮಂಜ ಬೊಯ್ದದೆ. ಇನ್ನ್ ಜಂಬರ ಜೆಟ್ಟಿಗೆ ಹೋಗ್ಬಡಾಂತ. ಕೈ ಕಾಲ್‌ನೂ ನಡ್ಗಿದೆ. ದೊಣ್ಣೆ ಇಲ್ಲದೆ ಹೊರಗೆ ಹೋಕಾದ್ಲೆ. ನಾ ಬಾದ್ಲೆ ಬಲ? ಮಂಜನನೂ, ಸೊಸೆನನೂ ಕಳ್ಸಿನೆ." – ಎಂತ ಎಸ್ಟ್ ಹೇಳ್ರೂನೂ ಅಂವ ಕೇಳ್ತ್‌ಲ್ಲೆ. ಬಂದೇ ಬರೋಕೂಂತ ಹಟ ಮಾಡ್ತ್.

ಹಂಗಾಗಿ ಸಣ್ಣಮ್ಮಜ್ಜಿ ಮಂಜ ರವಿನೊಟ್ಟಿಗೆ,

"ಇದ್ ಅಕೆರಿನ ಜಂಬರ. ಇನ್ನ್ ಮುಂದೆ ನಾ ಎಲ್ಲಿಗುನೂ ಹೋದುಲ್ಲೆ. ಮಹೇಶನ ಮನೆಗೆ ಮಾತ್ರ ನನ್ನ ಕರ್‍ಕೊಂಡೋಗು. ಅಂವ ಅಸ್ವಲ್ಲದೆ ಹೇಳಿಟು."- ಎಂತ ದುಂಬಾಲ್ ಬಿದ್ದ್ ಕೇಳ್ದೊ. ಅರೆಮೊನ್ಸ್‌ಂದ ಮಂಜ ಒಪ್ಪಿಕಂಡಿತ್ತ್. ಈಗ ಅಂವಂಗೆ ಕುಸಿ ಆಗಿರ್‍ದು. ನನ್ನ ಕರ್‍ಕೊಂಡೋದು ತಪ್ಪಿತಲೇಂತ. ಏನ್ ಮಾಡ್ದು? ನನ್ನ ಗ್ರಾಚಾರ. ಇಂದೇ ಹೀಂಗಾಕೋ? ಬೇಡ. ಮಕ್ಕಳ ಮೊನ್ಸ್‌ನ ಬೇನೆ ಮಾಡಿಕೆ ಆಗದ್. ಯಾರ್ ಎಸ್ಟೇ ಕರ್‍ಯಲಿ. ನಾ ದಿನ ಕಳ್ಯೋದು ಮಂಜನ ಕಾಲ್ಬುಡಲಿ ಅಲ್ಲನೋ? ಇನ್ನ್ ಮುಂದೆ ಎಲ್ಲಿಗುನೂ ಹೋದುಲ್ಲೆ." - ಎಂತ ಮೊನ್ಸ್ ಗಟ್ಟಿ ಮಾಡಿಕೊಂಡೊ. ಈಗ ಅವರ ಮೊನ್ಸ್ ಹಗ್‌ರಾತ್. ಅಲ್ಲಿಂದ ಮೇಲೆ ಸಣ್ಣಮ್ಮಜ್ಜಿ ಜಂಬರಕ್ಕೆ ಹೋವುದರ ನಿಲ್ಸಿದೊ.

* * * * *

✍ಎಂ. ಜಿ. ಕಾವೇರಮ್ಮ

## ವರದಿ

ಇತ್ತಿಚೇಗೆ ನಾಲ್ಕೂರು ಗ್ರಾಮದ ಹಾಲೆಮಜಲ್‌ನ ವೆಂಕಟೇಶ್ವರ ಸಭಾಭವನಲಿ ನಡ್ದ ಅರೆಭಾಷೆ ಸಂಸ್ಕೃತಿಲಿ ಆಟಿ ಉತ್ಸವ ಕಾರ್ಯಕ್ರಮ ಬಹಳ ಅದ್ದೂರಿಯಾಗಿ ನಡ್ತ್. ನಾಲ್ಕೂರು ಗ್ರಾಮಲಿ ಹೊಸತಾಗಿ ಆಟಿ ಉತ್ಸವ ಸಮಿತಿ ಮಾಡಿಕಂಡ್ ಸಮಿತಿನ ಅಧ್ಯಕ್ಷರಾಗಿ ಗ್ರಾಮದ ದೇರಪ್ಪಜ್ಜನ ಮನೆ ಉದಯ ಕುಮಾರ್‌ನವರ ಉಸ್ತುವಾರಿಲಿ ಗ್ರಾಮದ ಇನ್ನಿತರ ಆಸಕ್ತರ ಸಹಾಯದೊಟ್ಟಿಗೆ ಬಹಳ ಯಶಸ್ವಿ ಆಗಿ ನಡ್ತ್. ಕಾರ್ಯಕ್ರಮದ ಸಂಚಾಲಕರಾಗಿ ಅಕಾಡೆಮಿ ಸದಸ್ಯರಾದ ದಿನೇಶ್ ಹಾಲೆಮಜಲು ಮತ್ತೆ ಪರಶುರಾಮ ಚಿಲ್ತಡ್ಕನವು ಯಶಸ್ವಿಯಾಗಿ ಕಾರ್ಯ ನೀಸಿದೊ.

# ಚ್ವಾರಕ್ಕಿ ಕಥೆ

ಬಾಳ ಹಿಂದಿನ ಕಾಲಲಿ ಅವಂದೂರುಂತ್ಹೇಳುವ ಗ್ರಾಮಲಿ, ಗೌಡ್ನ ಕಾಡ್ತ್ಹೇಳುವ ಒಂದು ದೊಡ್ಡ ಕಾಡಿತ್ತ್. ಆ ಕಾಡ್‌ಲಿದ್ದ ಒಂದು ದೊಡ್ಡ ಹಲಸಿನ ಮರಲಿ ಒಂದು ಚ್ವಾರಕ್ಕಿ ಅಡ್ಡ ಬಿಡ್ಡ ಕಡ್ಡಿ ಮಡ್‌ಗಿ ಗೂಡ್‌ಕಟ್ಟಿ ಮೂರು ಮೊಟ್ಟೆ ಹಾಕಿತ್. ಮೊಟ್ಟೆ ವಡ್‌ದ್ ಮೂರ್ ಮರಿ ಮಾಡ್‌ತ್. ಮರಿಗಳಿಗೆ ವಾಸ ಮಾಡಿಕೆತ ಬೆಲ್ಲದಚ್ಚಿನ ತಂದ್ ಗೋಡೆ ಕಟ್ಟಿ, ಕಬ್ಬಿನ ಜಲ್ಲೆನ ತಂದ್ ಗಳು ಹಾಕಿ, ಹೂವುಗಳನ್ನು ತಂದ್ ಹುಲ್‌ಹಾಕಿ ಒಂದು ದೊಡ್ಡ ಮನೆ ಕಟ್ಟಿತ್. ಊರವರ್‍ನೆಲ್ಲ ಕರ್‌ದ್ ಊಟ ಹಾಕಿತ್. ಹಂಗೇ ಮಕ್ಕಳಿಗೆ ಹೆಸ್‌ರ್ ಹಾಕಿಕೆಂತೇಳಿ ಕೇಳ್‌ಸಿಕೆ ಬಟ್ಟ್‌ರತ್ರ ಹೋತು. ಆಗ ಬಟ್ಟ್‌ರ್ ಕೇಳ್‌ದೋ ಚ್ವಾರಕ್ಕಿ ಚ್ವಾರಕ್ಕಿ ನೀನ್ ಎಂತೆಲ್ಲ ತಂದ್ ಮನೆ ಕಟ್ಟಿದ ಹೇಳ್‌ತ್ಹ್ಯೋಳ್‌ತ್. ಆಗ ಜ್ವಾರಕಿ ಬೆಲ್ಲದಚ್ಚ್ ತಂದ್ ಗೋಡೆ ಕಟ್ಟಿದೆ. ಕಬ್ಬಿನ ಜಲ್ಲೆ ತಂದ್ ಗಳು ಹಾಕಿದೆ. ಹೂವುಗಳನ್ನೆಲ್ಲ ತಂದ್ ಹುಲ್ಲ್ ಹಾಕಿದೆಂತ್ಹ್ಯೋಳ್‌ತ್. ಆಗ ಬಟ್ಟ್‌ರ್ ದೊಡ್ಡವುಳಿಗೆ ಬೆಲ್ಲದ ಮಲ್ಲಕ್ಕ ಎರಡನೇವುಳಿಗೆ ಕಬ್ಬಿನ ಸುಬ್ಬಕ್ಕ, ಮೂರನೆವುಳಿಗೆ ಹೂವಿನ ಮಾದೇವಿಂತ ಹೆಸ್‌ರಾಕ್‌ತ ಬಟ್ಟ್‌ರ್ ಹೇಳ್‌ದೊ.

ಚ್ವಾರಕ್ಕಿ ಓಡೋಡಿ ಮನೆಗೆ ಬಾತ್. ಮನೆಗೆ ಬಂದ್, ನಾಯಣ್ಣ, ಕೋಳಿಯಕ್ಕ, ನರಿಯಣ್ಣ, ಹಂದಿಯಣ್ಣ, ಹುಲಿಯಣ್ಣ, ಕರ್‌ಡಿಯಣ್ಣ, ಆನೆಣ್ಣ, ನವಿಲಕ್ಕ, ಗಿಳಿ ಹಿಂಡ್ ನೆಂಟ್‌ರ್‌ಗೆಲ್ಲ ಎಲ್ಲವು ಕೇಳಿ ನನ್ನ ದೊಡ್ಡ ಮಗಳಿಗೆ ಬೆಲ್ಲದ ಮಲ್ಲಕ್ಕ, ಎರ್‌ಡ್ನೆವುಳಿಗೆ ಕಬ್ಬಿನ ಸುಬ್ಬಕ್ಕ, ಮೂರನ್ನೆವುಳಿಗೆ ಹೂವಿನ ಮಾದೇವಿತ ಹೆಸ್‌ರ್ ಹಾಕಿಕೆ ಬಟ್ಟ್‌ರ್ ಹೇಳಿಯೊಳೊತ ಸಾರ್‌ಸಿತ್.

ಇನ್ನ್ ಮಕ್ಕಳಿಗೆ ಅನ್ನ ಚಟ್ನಿ ಕೊಟ್ಟ್ ಸಾಕೋಕಲ. ಬೆಳೆ ಬಾಕನ ಭತ್ತನ್ನೆಲ್ಲ ತಂದ್ ಜಕ್ರಿ ಮಾಡಿತ್. ಒಂದು ದಿನ ಶುಕ್ರಾರ ಅಂದ್ ಭತ್ತ ಕುಟ್ಟಿ, ಅಕ್ಕಿ ಮಾಡಿ ಸಂತೆಗ್ಹೋಗಿ ಸಾಮಾನ್ ತರೋಕು. ಚ್ವಾರಕ್ಕಿ ಶುಕ್ರಾರ ದಿನ ಬೆಳಿಗ್ಗೆ ಬ್ಯಾಗ ನಾಕಂಟೆ ರಾತ್ರಿಗೆ ಎದ್ದ್ ಮುಖ ತೊಳ್ದ್ ವಲೆ ಬೂದಿ ಎತ್ತಿ ಬೆಂಕಿ ಮಾಡಿ ಕಾಫಿ ಮಾಡಿ ಕುಡ್‌ದ್ ಭತ್ತ ಹೊತ್ತ್‌ಕಂಡ್ ಕೊಟ್ಟಿಗೆಗೆ ಭತ್ತ ಕುಟ್ಟಿಕ್ಕೆ ಹೋತ್. ಮಕ್ಕ ಎದ್ದರೆ ನನ್ನ ಕೆಲ್‌ಸಕೆ ಬುಡ್‌ದುಲೇಂತ ಬ್ಯಾಗ ಬ್ಯಾಗ ವತ್‌ಲಕ್ಕಿ ಮಾಡಿ ಪಾರಕ್ಕಿ ಮಾಡಿ, ತೊಳ್‌ಸಿ ಹೊಡ್‌ಕಿ, ವಂಚಿ ಅಕ್ಕಿನ ಮನೆಗೆ ತಕಂಡ್ಹೋಗಿ ಅನ್ನ ಮಾಡಿ ಮಡ್‌ಗಿ ಮಕ್ಕಳೇ ಮಕ್ಕಳೇ ನಾನ್ ಸಂತೆಹ್ಹೋಗಿ ಸಾಮಾನ್

ತಕಬನ್ನೆ. ನೀವು ಮಾತ್ರ ಯಾರು ಮನೆ ಬಾಗ್‌ಲ್ ತೆಗ್‌ದ್ ಹೊರಗೆ ಹೊಗ್ಬಡಿ. ನಾನ್ ಸಂತೆಂದ ಬಂದ್ ಬೆಲ್ಲದ ಮಲ್ಲಕ್ಕ, ಕಬ್ಬಿನ ಸುಬ್ಬಕ್ಕ, ಹೂವಿನ ಮಾದೇವಿತ ಹೊರಗೆಂದ ಕರ್‌ದನೆ ಆಗ ನೀವು ಒಂದು ಚೊಂಬು ನೀರ್ ತಕಂಡ್ ಹೊರಗೆ ಬರೊಕುತ ಅವ್ವ ಮಕ್ಕಳಿಗೆ ಬುದ್ಧಿ ಹೇಳಿ ಸಂತೆಗೆ ಹೋತು.

ಗುಳ್ಳೆನರಿ (ಕುದುಕ) ಉಟ್ಟಲ್ಲ ಅದ್ ಬಾರಿ ಬುದ್ಧಿವಂತ ಹಂಗೇ ಬಾರಿ ಉಪಾಯವಂತ. ನಾವ್ ಯಾರಿಗಾರ್ ಎಲ್ಲವು ಗುಂಪುಲಿ ಹೋಕನ ಒಬ್ಬ ಸ್ವಲ್ಪ ಹಿಂದೆ ಆದರೆ ಅವುಕ್ಕೆ ನಾವು ಏನ್ ಕುದ್‌ಕನಂಗೆ ಹಿಂದೆ ಉಳ್‌ದೋಳತ ತಮಾಷೆ ಮಾಡ್ವೆಲ್ಲ. ಹಂಗೆ ಚ್ವಾರಕ್ಕಿ ಅವ್ವ ಮಕ್ಕಳಿಗೆ ಹೇಳ್‌ವ ಬುದ್ಧಿ ಮಾತ್‌ನ್ನೆಲ್ಲ ಕೇಳ್‌ಸಿಕಂಡ್ ಮನೆ ಹಿಂದೆ ಸೌದೆ ಕೊಟ್ಟಿಗೇಲಿ ಅಣ್‌ಗಿ ಕುದ್‌ಕಂತ್.

ಅವ್ವ ಚ್ವಾರಕ್ಕಿ ಸಂತೆಗ್ಹೋಗಿ ಸುಮಾರ್ ಹೊತ್ತಾತ್. ಸುಮಾರ್ ಗಂಟೆ 11–12 ಆತ್. ಅದ್ ಸಾಮಾನ್ ತರಕ್ಕಾರಿ ಹೊತ್ತ್‌ಕಂಡ್ ಕುದ್ದ್ ನಿತ್ತ್, ದಣಿವಾರ್‌ಸಿಕೆಂಡ್ ಬರೋಕಲ 12 ಗಂಟೆ ಆತ್ತ್ವೇಳ್‌ಕನ ಸೌದೆ ಕೊಟ್ಟಿಗೇಲಿ ಅಣ್‌ಗಿ ಕುದ್ದ ಕುದ್‌ಕ ಮೆಲ್ಲೆ ಬಾಗ್‌ಲ್ಹತ್ರ ಬಾತ್. ಅವ್ವ ಚ್ವಾರಕ್ಕಿ ಕರ್‌ದಂಗೆ ಬೆಲ್ಲದ ಮಲ್ಲಕ್ಕತ ಕರ್‌ತ್. ಅವುಳು ಅವ್ವ ಬಾತ್ ಅವ್ವ ಬಾತ್‌ತ ಒಂದು ಚೊಂಬು ನೀರ್ ತಕಂಡ್ ಬಂದ್ ಬಾಗ್‌ಲ್ ತೆಗ್‌ತ್. ಬಾಗ್‌ಲ್ ಕರೇಲಿ ಅಣ್‌ಗಿ ನಿತ್ತ ಕುದ್‌ಕ ಅದರ ಹಿಡ್‌ದ್ ಒಂದೇ ಬಾಯಿಗೆ ತಿಂದ್ ಹಾಕಿತ್. ಪುನಃ ಸ್ವಲ್ಪ ಹೊತ್ತಿಗೆ ಕಬ್ಬಿನ ಸುಬ್ಬಕ್ಕತ ಕುದ್‌ಕ ಕರ್‌ತ್. ಅವುಳ್ ಹಂಗೆ ಅವ್ವ ಬಾತ್ ಸಾಮಾನ್ ತಾತ್‌ತ ಒಂದು ಚೊಂಬು ನೀರ್ ತಕಂಡ್ ಓಡಿ ಬಂದ್ ಬಾಗ್‌ಲ್ ತೆಗ್‌ತ್. ಅಲ್ಲೇ ಅಣ್‌ಗಿದ್ದ ಕುದ್‌ಕ ಅವಳ್ನ ಹಿಡ್‌ದ್ ತಿಂದ್ ಹಾಕಿತ್ತ್. ಪುನಃ ಸ್ವಲ್ಪ ಹೊತ್ತ್ ಕಳ್ಡ್ ಹೂವಿನ ಮಾದೇವಿತ ಕುದ್‌ಕ ಕರ್‌ತ್. ಅವುಳ್ ಸಹ ಅವ್ವ ಬಾತ್ ತಿಂಡಿ ತಾತ್‌ತ ಒಂದು ಚೊಂಬು ನೀರ್ ತಕಂಡ್ ಬಂದ್ ಬಾಗ್‌ಲ್ ತೆಗ್‌ತ್. ಅವಳ್ನ ಸಹ ಹಿಡ್‌ದ್ ಒಂದೇ ಬಾಯಿಗೆ ತಿಂದ್ ಹಾಕಿತ್. ಈಗ ಮನೇಲಿ ಮೂರು ಮಕ್ಕಳು ಇಲ್ಲೇ.

ಇತ್ತ ಸಂತೆಗೋದ ಅವ್ವ ಮಕ್ಕಳಿಗೆ ಬಟ್ಟೆ, ಆಟದ ಸಾಮಾನ್, ತಿಂಡಿ ಎಲ್ಲಾ ಹೊತ್ತ್‌ಕಂಡ್ ಕುಷಿಲಿ ಮನೆಗೆ ಬಂದ್ ನೋಡ್‌ದೇ. ಮನೆ ಬಾಗ್‌ಲ್ ತಕಂಡೆ ಉಟ್ಟು, ಮಕ್ಕ ಎಲ್ಲಿಹೋದ್ರೋ ಮಕ್ಕಳೇ ಮಕ್ಕಳೇತ ಕರ್‌ದರೆ ಮಕ್ಕಳ ಸದ್ದೇ ಇಲ್ಲೇ. ಚ್ವಾರಕ್ಕಿ ನನ್ನ ಮಕ್ಕ ಕಾಂಬಲೆ, ಯಾರಾರ್ ಬನ್ನಿ ಹುಡ್‌ಕಿ ಕೊಡೀತ ಅತ್ತ್‌ಕಂಡ್ ಮರ್‌ಟ್‌ಕಂಡ್ ಊರೆಲ್ಲ ಹುಡ್‌ಕಿತ್. ಮಕ್ಕ ಎಲ್ಲಿ ಸಿಕ್ಕಿತ್ಲೆ. ಇನ್

ಏನ್ ಮಾಡ್‌ದು ಯಾರ್‌ನ್ನ ಕೇಳ್‌ದುತ ಸೀದ ಊರ್ ಪಟೇಲ ಅಪ್ಪಚ್ಚಿನ ಹತ್ರ ಹೋತು. ಇದರ ಗೋಳುನ ಕಂಡ್ ಚ್ವಾರಕ ಚ್ವಾರ್ಥಕಕ್ಕ ಅಂತಹ ಕಷ್ಟ ಏನ್ ಬಾತ್ ನಿಂಗೆ ಏನಾತ್ ಹೇಳ್‌ತ ಕಣ್ಣೀರ್ ವರ್‌ಸಿ ಅಪ್ಪಚ್ಚಜ್ಜ ಕೇಳ್‌ತ್. ಆಗ ಚ್ವಾರಕ್ಕಿ ನನ್ನ ಕಷ್ಟನ ಹಾಲ್‌ಸವು ಇಲ್ಲೇ, ತೀರ್‌ಸವು ಇಲ್ಲೆತ ನಿಮ್ಮತ್ರ ಬಂದೇತ್ತೇಳ್‌ತ್. ಪಟೇಲ ಹಾಲ್‌ಸಿಕ್ಕಾದರೆ ಹಾಲ್‌ಸಿನೆ, ತೀರ್‌ಸಿಕ್ಕಾದರೆ ತೀರ್‌ಸಿನೆ ನಿನ್ನ ಕಷ್ಟನ ಬಾಯಿ ಬುಟ್ಟ್ ಹೇಳ್‌ತ್ತ್ಹುಳ್‌ದೋ.

ಇಂದ್ ಶುಕ್ರಾರ ನಾನ್ ಸಂತೆಗೆ ಸಾಮಾನ್‌ಗೆ ಹೋಗಿದ್ದೆ. ನಾನ್ ಸಂತೆಂದ ಬಾಕನ ನನ್ನ ಮೂರು ಮಕ್ಕಳು ಕಾಣೆಯಾಗೊಳೊ. ಯಾರ್‌ನ್ನ ಕೇಳ್‌ರು ನಂಗೆ ಗೊತ್ಲೆ, ನಾ ಕಂಡತ್ಲೆತ್ತೇಳುವೆ. ಪಟೇಲರೇ ನನ್ನ ಮೂರು ಮಕ್ಕಳನ್ನ ಹುಡ್‌ಕಿ ನಂಗೆ ತಂದ್ ಕೊಟ್ಟರೆ ಏಳೇಳ್ ಜನ್ಮಕ್ಕೆ ನಿಮಗೆ ನಾ ಋಣಿಯಾಗಿದ್ದನೆತ ಚ್ವಾರಕ್ಕಿ ಪಟೇಲನ ಕಾಲ್‌ಗೆ ಅಡ್ಡಬೀತ್.

ಪಟ್ಟೇಲಂಗೆ ಕಂಡಾಬಟ್ಟೆ ಮಂಡೆ ಬಿಸಿಯಾತ್. ಏನ್ ಮಾಡ್‌ದುತ ಗ್ಯಾನ ಮಾಡ್‌ತ್, ಕಾಡ್‌ಲಿರುವ ಊರವರನ್ನೆಲ್ಲ ಸೇರ್‌ಸಿ ಒಂದು ದೊಡ್ಡ ಪಂಚಾಯ್ತಿ ಮಾಡ್‌ತ್. ಅಲ್ಲಿಗೆ ಎಲ್ಲವು ಬಂದ್ ಸೇರ್‌ದೊ. ಒಬ್ಬೊಬ್ಬ ಒಂದೊಂದು ಉಪಾಯಗಳನ್ನ ಹೇಳ್‌ದೊ. ಆನೆ ಅಣ್ಣಂಗೆ ಹೇಳ್‌ದೋ ಒಂದು ದೊಡ್ಡ ಗುಂಡಿ ತೆಗಿತ, ಮಂಗಣ್ಣಂಗೆ ನೀನ್ ಒಂದು ಪಾಲ ಹಾಕ್‌ತ್ತೇಳ್‌ದೊ, ಹುಲಿಣ್ಣ, ಕರಡಿಯಣ್ಣಂಗೆ ಒಂದು ದೊಡ್ಡ ಮೆಣ್‌ಸ್‌ನ ಮುದ್ದೆ ಮಾಡಿಕೆ ಹೇಳ್ತ್. ಚ್ವಾರಕ್ಕಿಗೆ ನೀನ್ ಒಂದು ಚೀಪೆ ಸುಡಿ ತಕಂಡ್ ಕೂರುತ ಹೇಳ್ತ್. ಅವ್‌ಕ್ಕೆವಿಕ್ಕೆ ಹೇಳ್‌ದ ಕೆಲ್‌ಸನ ಅವವು ಮಾಡ್‌ದೋ ಎಲ್ಲವುಕ್ಕೂ ಅಚ್ಚರಿ ಏನ್ ಮಾಡುವೆ ಈಗತ.

ಪಟೇಲ ಹೇಳ್‌ವೇ ಎಲ್ಲವು ಸಾಲಾಗಿ ನಿಲ್ಲೋಕು. ಒಬ್ಬೊಬ್ಬನಾಗಿ ಈ ಬಾಳೆ ಪಾಲದ ಮ್ಯಾಲೆ ನಡ್‌ಕಂಡ್ ಹೋಕು, ಹೋಕಾಕನ ನಾನ್ ಚ್ವಾರಕ್ಕಿನ ಮಕ್ಕಳ ತಿಂದರೆ ಪಾಲದಡಿಗೆ ಬೀಳುವೇ, ಇಲ್ಲದಿದ್ದರೆ ದಡ ಸೇರುವೆತ ಹೇಳಿಕಂಡ್ ಹೋಕುತ್ತ್ಹುಳ್‌ದೊ. ಸರ್‌ದಿ ಪ್ರಕಾರ ಒಂದೊಂದಾಗಿ ಎಲ್ಲವು ಈ ಮಂತ್ರನ ಹೇಳಿಕಂಡ್ ಪಾಲ ದಾಟಿದೋ. ಇನ್ ಉಳ್‌ದದ್ ಕುದ್‌ಕ್ಕಣ್ಣ ಒಬ್ಬನೇ. ಅದ್ ಹೆದ್‌ರಿಕಂಡ್ ಕೈ ಕಾಲ್ ನಡ್‌ಗಿಕಂಡ್ ಹಿಂದೆ ನಿತ್ತಿತ್. ಸರಿ ಈಗ ಅದರ ಸರ್‌ದಿ ಅದ್ ಬಾಯಿ ತಡ್‌ರ್‌ಸಿಕಂತ್. ನಾನ್ ಚ್ವಾರಕ್ಕಿ...ನ ಮ....ಕ್ಕ...ಳ ತಿಂದಿದ್ದ.... ಗುಂ..ಡಿ..ಗೆ ಬೀ...ಳು...ವೆ. ಇಲ್ಲದಿದ್ದರೆ ಅವರಂಗೆ ನಾನು ದ..ಡ... ಸೇರುಂವೆ.... ಹೇಳಿ ಪಾಲ ಹತ್ತಿತ್. ಹೆಜ್ಜೆ 2 ಹೆಜ್ಜೆ 3 ಹೆಜ್ಜೆ 4 ಹೆಜ್ಜೆ 5

ಹಾಕ್‌ಕಾಕನ ಪಾಲ ಮುರ್‌ದ್ ಗುಂಡಿ ವಳಗೆ ಬಿತ್ತ್. ಅಲ್ಲೆ ಮೆಣ್‌ಸ್‌ನ ಮುದ್ದೆ, ಚೀಪೆ ಸುಡಿ ಹಿಡ್‌ಕಂಡ್ ಕುದ್ದ ಚ್ವಾರಕ್ಕಿ ಕುದ್‌ಕನ ಬಾಯಿಗೆ ಮೆಣ್‌ಸ್‌ನ ತುಂಬುಸಿತ್. ಚೀಪೆ ಸುಡಿಲಿ ಹೊಡ್‌ದ್ ಹೊಡ್‌ದ್ ಹಾಕಿತ್. ಎಲ್ಲವು ಸೇರಿ ಹೊಡೆಯಕಾಕನ ಅದರ ಹೊಟ್ಟೆಲಿದ್ದ ಚ್ವಾರಕ್ಕಿನ ಮೂರು ಮಕ್ಕಳ್ನ ಕಕ್ಕಿತ್. ಕುದ್‌ಕ ಸತ್ತ್ ಹೋತು.

ಆಗ ಅವ್ವ ಚ್ವಾರಕ್ಕಿ ಊರವೆಲ್ಲ ಸೇರಿ ಆ ಮೂರು ಮಕ್ಕಳ್ನ ಸ್ನಾನ ಮಾಡ್‌ಸಿ, ಅವುಕ್ಕೆ ಬಟ್ಟೆ ಹಾಕಿ ಸೊನೋ ಪೌಡರ್ ಎಲ್ಲ ಹಾಕಿ, ಬಣ್ಣ ಬರ್‌ದ್ ಪೊರ್ಲ್ ಮಾಡ್‌ದರ ನೋಡ್‌ಕಾಕನ ಅವ್ವನ ಕುಷಿಗೆ ಸಂತೋಷಂದ ಕಣ್ಣೀರ ಕೋಡಿನೇ ಹೊಳೆಯಾಗಿ ಹರ್‌ತ್. ಕಾಡ್‌ಲಿರವುಕ್ಕೆ ಕುಡಿಯಕೆ ನೀರಾತ್. ಅವ್ವ ಚ್ವಾರಕಿನ ಆಸೇನ ಪೂರೈಸಿದ ಊರ್ ಪಟೇಲ ಅಪ್ಪಚ್ಚಜ್ಜಂಗೆ ಋಣಿಯಾತ್. ಚ್ವಾರಕ್ಕಿನ ಆ ಮೂರು ಮಕ್ಕಳ್‌ಂದ ಈಗ ಕಾಡ್ ವನಲಿ ಒಂದಕ್ಕೆ ಹತ್ತಾಗಿ, ಹತ್ತಕ್ಕೆ ನೂರಾಗಿ, ನೂರಕ್ಕೆ ಸಾವುರ ಆಗಿ ಸಾವುರಕ್ಕೆ ಲಕ್ಷ, ಕೋಟಿ, ಮಿಲಿಯಾಗಿ ಸಂಸಾರ ಮಾಡಿಕಂಡ್ ವಳೋ.

ನೀತಿ : "ಸತ್ಯಕ್ಕೆ ಸಾವಿಲ್ಲೆ"

✍ಕಡ್ಯದ ಪಾರ್ವತಿ ಕೃಷ್ಣಪ್ಪ

**ನಿರೀಕ್ಷಿಸಿ**

ಇಷ್ಟರ್ಲೇ ಅಕಾಡೆಮಿ ವತಿಂದ ಅರೆಭಾಷೆಯ ಕೆಲವು ಹೊಸ ಪುಸ್ತಕಗ ಪ್ರಕಟ ಆದೆ. ಸಾಹಿತ್ಯಾಸಕ್ತರಾದ ನೀವು ನಿರೀಕ್ಷಿಸಿ.

# ಅರಿವು ಮೂಡ್ತ್

"ಮುತ್ತವ್ವಾ......"

'ಇದ್ಯಾರಪ್ಪಾ ಈಗ ಮತ್ತೆ' ಈಗ ತಾನೆ ಚೋಂದವ್ವನ ಸಾಗ ಹಾಕಿದಾತ್. ಇನ್ನ್ ಆ ಮಾತ್ ಮಲ್ಲಿ ಪೊನ್ನವ್ವ ಬಂದ್‌ಬುಟ್ರೆ ಮುಗ್ದೇ ಹೋತ್! ಅಡ್ಗೆ ಕೋಣೆಲಿ ಸಾರಿಗೆ ತರಕಾರಿ ಕೊಯ್ತಿದ್ದ ಮುತ್ತವ್ವ ಗೊಣ್ಗಿಕಂಡೇ ಕುದ್ದಲ್ಲಿಂದೇ ಕೇಳ್ದೊ.

"ಯಾರ್....."

"ನಾನ್ ಪೊನ್ನವ್ವ....."

'ಓ ತೂತ್ ಬಾಯಿನ ಪೊನ್ನವ್ವ ಬಂದೇ ಬುಡ್ತ್' ತೇಳಿ ಸಿಡ್ಕಿಕಂಡೇ ಎದ್ದ್ ಬಂದ್ ಬಾಗಿಲ್ ತೆರ್ತ್. ಮನ್ಸಲೇ ಕುಶಿಂದ ಕನಸ್ ಕಾಣ್ತಾ ಗಡಿಬಿಡಿಲಿ ಇದ್ದ ಮುತ್ತವ್ವನವ್ಕೆ ರಸ ಭಂಗವಾದಂಗಾಗಿತ್ತ್.

"ಏನ್ ಮುತ್ತವ್ವ ಬಾರಿ ಕುಶಿಲಿ ಇದ್ದಂಗೆ ಕಂಡದೆ, ಏನ್ ಸಮಾಚಾರ"

ಹೌದು ಪೊನ್ನವ್ವ ಇಂದ್ ನಮ್ಮ ಸೀಮಾನ ನೋಡಿಕೆ ಗಂಡ್‌ನ ಕಡೆಯವು ಬಂದವೆ"

"ಹೌದಾ ಬಾಳಾ ಸಮತೋಷ. ಗಂಡ್ ಯಾರ್?" ಇಷ್ಟಗಲ ಬಾಯಿ ತೆರ್ತ್ ಪೊನ್ನವ್ವ.

"ಅದೇ, ಆಚೆಕರೆ ಶಾಂತಿನ ಕಡೆಯಂವ, ಹೈದ ಲಕ್ಷಣವಾಗುಟ್ಟು, ಬುದ್ಧಿವಂತ, ಅನುಕೂಲಸ್ಥರುತ ಹೇಳಿಟ್ಟು"

"ಹೈದಂಗೆ ಚಾಕರಿ ಇಲ್ಲೆನಾ"

"ಹೈದ ಬೆಂಗಳೂರ್ ಲಿ ಇಂಜಿನಿಯರಾಗುಟ್ಟಂತೆ"

"ಹಂಗಾರೆ ಸೀಮಾ ತುಂಬಾ ಅದೃಷ್ಟವಂತಳೆ. ಅದ್ಸರಿ, ಸೀಮಾ ಇದ್ಕೆ ಒಪ್ಪಿಟ್ಟಾ?"

"ಅವ್ಳಿಗೆಂತ ಗೊತ್ತಾದೆ. ಪಾಪ ಅವ್ಳು ಇನ್ನೂ ಕಾಲೇಜ್‌ಲಿ ಓದುತುಟ್ಟು. ಈ ವರ್ಷ ಫೈನಲ್ ಇಯರ್ ಅಲಾ ಎಲ್ಲಾ ಸರಿ ಆದರೆ ಅವ್ಳ ಪರೀಕ್ಷೆ ಕಳ್ದಂಗೆ ಮದ್ವೆ ಮಾಡನತ ಗ್ಯಾನ ಮಾಡ್ಯೊಳೊ."

"ನೋಡಿ ಮುತ್ತವ್ವಾ, ನೀವ್ ಏನೇ ಹೇಳಿ ವಯಸ್ಸಿಗೆ ಬಂದ ಹೆಣ್ಮಕ್ಕಳಿಗೆ ಬೇಗ ಮದ್ವೆ ಮಾಡಿಬಿಡಕು. ಇಲ್ಲರೆ ಕೆಟ್ಟ ಹೆಸ್ರು ಬಂದದೆ."

ಮುತ್ತವ್ವನ ತಲೆ ಒಂದ್ ಗಳಿಗೆ ತಿರ್ಗಿದಂಗೆ ಆತ್. ಹಂಗಾರೆ ನಾನ್ ಕೇಳ್ದ ಸುದ್ದಿ ನಿಜ ಇರ್ದಾ? ಎಲ್ಲವ್ಕೂ ಗೊತ್ತುಟ್ಟು, ನಂಗೆ ಮಾತ್ರ ಗೊತ್ತಿಲ್ಲೆ. ತಾನ್ ಮಗಳ್ನ ಸರಿಯಾಗಿ ಬೆಳ್ಸಿವಳೆತ ತಿಳ್ಕಂಡದ್ ತಪ್ಪಾತಾ? ಇಂದ್ ಅವ್ಳಿಗೆ ಸರಿಯಾಗಿ

ಬುದ್ಧಿ ಹೇಳಿಕುತ ಗ್ಯಾನ ಮಾಡ್ತ್. ಆದರೆ ಅವ್ಳ ಮುಖ ನೋಡ್ಕನ ಅವ್ಳು ಹಂಗೆ ಇರ್ಕಿಲೆತ ನಾಲಿಗೆಲಿ ಮಾತ್ ಬರ್ತಿತ್ತ್‌ಲೆ.

"ಅಯ್ಯೋ, ನಾನ್ ಬಂದ ವಿಷ್ಯನೇ ಮರ್ತ್ ಬುಟ್ಟೆ. ಮುತ್ತವ್ವ ಮನೆಲಿ ಸಕ್ಕರೆ ಮುಗ್ದ್ ಹೋಗುಟ್ಟು. ಒಂದ್ ಕಪ್ ಸಕ್ಕರೆ ಕೊಟ್ರೆ ಒಂದ್ ವಾರಲಿ ಕೊಟ್ನೆ"

"ಪರ್ವಾಗಿಲ್ಲೆ ತಕಣಿ" ತೇಳಿ ಅಲ್ಲಿಂದ ಸಾಗ ಹಾಕಿ ತನ್ನ ಅಡ್ಗೆ ಕೆಲ್ಸ ಶುರುಮಾಡ್ತ್. ಮುತ್ತವ್ವಂಗೆ ತಲೆ ನೂರಾರು ಗ್ಯಾನಗ ಸುಳ್ದ್ ಹೋದೊ. ಅಷ್ಟೊತ್ತಿಗೆ ಬೆಲ್ ಸದ್ದ್ ಕೇಳ್ಸಿತ್. 'ಇದ್ಯಾರಪ್ಪಾ ಮತ್ತೆ ಗ್ರಹಚಾರ' ತೇಳಿ ಬಾಗ್ಲ್ ತೆಗ್ದೊ.

ಮಾರ್ಕೆಟಿಗೆ ಹೋಗಿದ್ದ ಮಾಚಯ್ಯನವು ವಾಪಾಸು ಬಂದಿದ್ದೊ. ಮುತ್ತವ್ವನವು ಆಶ್ಚರ್ಯಲಿ ಗಡಿಯಾರದ ಕಡೆ ನೋಡ್ದೊ. ಅದ್ ಆಗಲೇ ಒಂದ್ ಗಂಟೆ ತೋರ್ಸಿತಿತ್ತ್.

"ಇದೆಂತನೆ ಮುತ್ತು ವಳ್ಳೆ ಗುಂಡ್ ಕಲ್ಲ್‌ನಂಗೆ ನಿತ್ತ್‌ಬುಟ್ಟ ಎಂತಾತ್"

"ಎಂತ ಇಲ್ಲೆ. ಇಷ್ಟ್ ಹೊತ್ತಾದೇ ಗೊತ್ತಾತ್‌ಲೆ. ಅಡ್ಗೆನೇ ಆತ್‌ಲೆ. ಆ ಪೊನ್ನವ್ವ ಬಂದಿದ್ದೊ. ಅವರ್‍ನ ಸಾಗ ಹಾಕಿಕೆ ಇಷ್ಟ್ ಹೊತ್ತಾತ್ ನೋಡಿ" ನಿಟ್ಟುಸುರ್ ಬುಟ್ಟ್ ಹೇಳ್ತ್ ಮುತ್ತವ್ವ.

"ಪರ್ವಾಗಿಲ್ಲೆ ಬುಡ್ ಬೇಗ ಮಾಡ್ರೆ ಆತ್ ಸೀಮಾ ಇನ್ನೂ ಬಾತ್ಲೆನಾ"

"ಯಾಕೋ ಬಾತ್ಲೆಪ್ಪಾ, ಹನ್ನೆರಡ್ ಗಂಟೆಗೇ ಬನ್ನೆತ ಹೇಳಿತ್ತ್"

ಮಾಚಯ್ಯನವು ಊಟ ಮಾಡಿ ಒಂದ್ ಸಣ್ಣ ನಿದ್ದೆ ಮಾಡಿ ಎದ್ದ್ ಬಾಕನ ಮುತ್ತವ್ವ ನಾಕ್ ಗಂಟೆಗೆ ಇರ್‍ವ ತಿಂಡಿನ ತಯಾರಿ ಮಾಡಿಕಂಡಿದ್ದೊ.

ಈಗ ಇಬ್ಬರ ಎದೆಗ ಹೊಡ್ಕಣಿಕೆ ಶುರು ಆತ್. ಆಗಲೇ ಮೂರು ಗಂಟೆ ದಾಟಿತ್ತ್. ಇನ್ನೇನ್ ಎರ್ಡ್ ಗಂಟೆ ಒಳಗೆ ನೆಂಟರ್ ಬಂದವೆತ ತಿಳ್ಸಿದ್ದೊ.

ಮುತ್ತವ್ವನ ಮನ್ಸ್‌ಲಿ ಸಂಶಯ ಬಾಕೆ ಶುರ್ ಆತ್. ಈಗೀಗ ಸೀಮಾ ಅವ್ಕೆ ಬಿಡ್ಸಲಾಗದ ಒಗಟಾಗಿತ್ತ್. ನೆಂಟರ್ ಬಂದವೆತ ಹೇಳ್ಕನ ಅವ್ಳ ಮುಖ ಬಾಡಿ ಹೋಗಿತ್ತ್. ಆದರೂ ಮುತ್ತವ್ವನವ್ಕೆ ಅವ್ಳು ಹಂಗೆ ಮಾಡ್ಕಿಲೆತೇಳ್ವ ನಂಬಿಕೆ, ಅವ್ಕೆ ಇಪ್ಪತ್ತೆರಡರ ಸೀಮಾ ಇನ್ನೂ ಕೂಸುತೇಳ್ವ ಗ್ಯಾನ.

ಈಗೀಗ ಅವ್ಳು ಕಾಲೇಜ್‌ಂದ ಸರಿಯಾದ ಸಮೆಲಿ ಮನೆಗೆ ಬಾತಿತ್ತ್‌ಲೆ. ಮುಂದೆ ಐದ್ ಗಂಟೆಗೆಲ್ಲಾ ಮನೆಲಿ ಇರ್ಟಿದ್ದವ್ಳು ಈಗೀಗ ಸ್ಪೆಷಲ್ ಕ್ಲಾಸ್ ಅದ್ ಇದ್‌ತ ಆರ್ – ಏಳ್ ಗಂಟೆ ಆಗ್ತಿತ್ತ್.

ಮಾಚಯ್ಯನವ್ಕೆ ಸಿಟ್ಟ್ ಏರ ತೊಡಗಿತ್ತ್. 'ಸೀಮಾ ಯಾಕೆ ಹಿಂಗೆ ಮಾಡ್ತ್. ದಾರಿಲಿ ಏನಾರ ಆಗಿದ್ರ್‍ದಾ' ತೇಳಿ ಗ್ಯಾನ ಮಾಡ್ದೊ.

ಮುತ್ತವ್ವನವ್ಕೆ ಒಮ್ಮೆಗೆ ಎದ್ರು ಮನೆ ರಜನಿಗೆ ಆದಂಗೆ ಏನಾರ ಆಗಿದ್ರ್‍ದಾತ ನೆನ್ದ್ ಗಾಬರಿ ಆತ್. ಸ್ವಲ್ಪ ದಿನದ ಹಿಂದೆ ರಜನಿಗೆ ಕಾಲೇಜ್‌ಂದ ಬಾಕನ ಕಾರ್ ಆಕ್ಸಿಡೆಂಟ್ ಆಗಿತ್ತ್. ದೇವರೇ ನಮ್ಮ ಸೀಮಾಂಗೆ ಏನೂ ಆಗದಿರಲಿತ

ಮನ್ಸ್‌ಲೇ ದೇವ್ರಿಗೆ ಕೈ ಮುಗ್ದೊ.

ಅಷ್ಟೊತ್ತಿಗೆ ಬೆಲ್ಲ್ ಆತ್. ಸೀಮಾ ಬಾತ್‌ತೇಳಿ ಅವಸರಲಿ ಬಾಗಿಲ್ ತೆಗಿಯಕನ ಆಚೆ ಕರೆ ಶಾಂತಿ ನಿತ್ತಿತ್ತ್.

"ಅಂಕಲ್, ಇಂದ್ ನೆಂಟರ್ ಬಾದುಲೆತ ತಿಳ್ಸಿವಳೊ" ತೇಳ್ತ್

"ಯಾಕೆ ಶಾಂತಿ ಏನಾತ್"

"ಗೊತ್ತ್‌ಲೆ ಅಂಕಲ್, ತಿಳ್ಸಿಬುಡ್ತ ಹೇಳ್ದೊ ಅಷ್ಟೆ. ನಂಗೆ ಅರ್ಜೆಂಟ್ ಉಟ್ಟು ಬನ್ನೆತ" ಹೊರ್ಟು ಹೋತ್

ಮಾಚಯ್ಯನವ್ಕೆ ಮುಖಕ್ಕೆ ಹೊಡ್ದಂಗೆ ಆಗಿತ್ತ್. ಸೀಮಾ ಬಾರದೆ ಇರ್ದಕ್ಕೂ ಇದಕ್ಕೂ ಏನಾರ ಸಂಬಂಧ ಉಟ್ಟಾ? ಅವ್ರ ಮನ್ಸ್ ಕಲ್ಪನೆನ ಗುಲಾಮ ಆಗಿತ್ತ್. ಎಷ್ಟೋ ಹೊತ್ತ್ ಹಂಗೇ ನಿತ್ತಿದ್ದೊ ಮಾಚಯ್ಯನವು.

"ತಗಣಿ ಅಂಕಲ್ ಈ ಕಾಗದ. ನಿಮ್ಮ ಮಗ್ಳು ಸೀಮಾ ಕೊಟ್ಟುಬುಡುತ ಹೇಳಿ ಕೊಟ್ಟತ್" ತೇಳ್ವ ಎದ್ರು ಮನೆ ಹೈದನ ಸ್ವರ ಕೇಳಿ ಒಮ್ಮೆ ಬೆಚ್ಚಿ ಬಿದ್ದೊ.

"ಸೀಮಾನ ಕಾಗದನಾ? ಮಾಚಯ್ಯನವ್ಕೆ ಶಾಕ್ ಹೊಡ್ದಂಗೆ ಆಗಿತ್ತ್

ಹೌದು ಅಂಕಲ್ ಅವ್ಳು ಕಾಲೇಜ್ ಹತ್ರ ಕೊಟ್ಟತ್ತ್. ಅವ್ಳು ಬೈಕ್‌ಲಿ ಯಾರೊಟ್ಟಿಗೊ ಹೋತ್"

"ಸರೀಪ್ಪಾ ನೀನ್ ಹೋಗ್"ತ ಕಳ್ಸಿದೊ.

"ಮುತ್ತು, ಮುತ್ತು.... ಬಾ ಇಲ್ಲಿ" ಒಂದೇ ಸಮನೆ ಕರ್ದೊ.

"ಇನ್ನ್ ಎರ್ಡೇ ವಡೆ ಉಟ್ಟ್. ಹೊರ್ದು ಬಂದುಬುಟ್ಟೆ ನೆಂಟರ್ ಬಂದ್ ಬುಟ್ರೆ ಕಷ್ಟ"

"ನೆಂಟ್ರ್ ಇಲ್ಲೆ ಯಾರೂ ಇಲ್ಲೆ ಬೇಗ ಬಾ

ಒಳಗಿಂದ ಬಂದ ಮುತ್ತವ್ವ ಕಾಗದ ನೋಡಿ "ಯಾರ್ದ್ ಕಾಗದ...." ತೇಳಿ ಅವ್ರ ಕೈಯಿಂದ ಎಳ್ಕಂಡ್ ಓದಿದೊ.

"ಅಯ್ಯೋ....." ತೇಳಿ ಕುಸ್ದ್ ಬಿದ್ದೊ.

ಮಾಚಯ್ಯನವು ಗಾಬರಿಂದ ಅವರ್ನ ಮೆಲ್ಲೆ ಸೋಪಾಲಿ ಮಲ್ಗಿಸಿ ಮುಖಕ್ಕೆ ನೀರ್ ಹಾಕಿದೊ. ಕಾಗದ ಕೆಳಗೆ ಬಿದ್ದಿತ್ತ್. ಎತ್ತಿಕಂಡ್ ಓದಿದೊ.

"ಪ್ರೀತಿಯ ಅಪ್ಪಂಗೆ, ನನ್ನ ಕಾಗದ ನೋಡಿ ನಿಮಿಗೆ ಬಾಳಾ ಆಶ್ಚರ್ಯ ಆಗಿರ್ದು. ಇವ್ಳು ಫೋನ್ ಮಾಡ್ದು ಬುಟ್ಟ್ ಕಾಗದ ಯಾಕೆ ಬರ್ದುಟುತ. ನಂಗೆ ಫೋನ್ ಮಾಡಿ ನಿಮ್ಮೊಟ್ಟಿಗೆ ಮಾತಾಡಿಕೆ ಧೈರ್ಯ ಬಾತ್‌ಲೆ. ಅಪ್ಪ-ಅಮ್ಮ ಕ್ಷಮಿಸಿಬುಡಿ. ನಾನ್ ನನ್ನ ಲೆಕ್ಚರರ್ ಅಶೋಕನೊಟ್ಟಿಗೆ ಮೈಸೂರಿಗೆ ಹೋಗ್ತಾವಳೆ. ಅವರ್ನೇ ನಾನ್ ಮದ್ವೆ ಆಕುತ ವಳೆ. ಅವ್ಕೆ ಇಲ್ಲಿಂದ ಮೈಸೂರಿಗೆ ವರ್ಗ ಆಗುಟ್ಟು. ನಾಳೆ ಮೈಸೂರ್‌ಲಿ ದೇವಸ್ಥಾನಲಿ ನಮ್ಮ ಮದ್ವೆ, ನಿಮಿಗೆ ಹೇಳಿಕೆ ನಂಗೆ ಧೈರ್ಯ ಇಲ್ಲೆ ಯಾಕೆತೇಳ್ರೆ ಅಶೋಕ್ ಜಾತಿ ಬೇರೆ. ನೀವು ಒಪ್ಪುದುಲೆತ

ಗೊತ್ತ್. ನನ್ನ ನೋಡಿಕೆ ಬರವ್ಕೆ ನಾನೇ ಬೇಡಾತ ತಿಳ್ಸಿದ್ದೆ. ನಿಮಿಗೆಲ್ಲಾ ಬಾಳಾ ನಿರಾಶೆ ಆಗಿರ್ದು. ಅಪ್ಪ ನಾನ್ ಮಾಡ್‌ತಿರ್‍ವ ಕೆಲ್ಸ ತಪ್ಪುತ ನಂಗೆ ಗೊತ್ತುಟ್ಟು, ಆದರೆ, ಅಶೋಕನ ಬುಟ್ಟ್ ನಾನ್ ಬದ್ಕಿಕೆ ಆದುಲೆತ ಆಗೊಳೆ. ನಿಮ್ಮ ಮುದ್ದಿನ ಮಗಳ ತಪ್ಪುನ ಕ್ಷಮಿಸಿರೆತ ನಂಬಿನೆ. ಅಮ್ಮಂಗೆ ನನ್ನ ಸಾಷ್ಟಾಂಗ ನಮಸ್ಕಾರ ತಿಳ್ಸಿ"

ಕಾಗದ ಓದಿ ಕ್ಷಣಕಾಲ ದಿಗ್ಭ್ರಾಂತಿಂದ ಕುರ್ಚಿಲಿ ಕುಸ್ದ್ ಕುದ್ದ್ ಬುಟ್ರೊ ಮಾಚಯ್ಯನವು. ನನ್ನ ಸೀಮಾ ಇಂತ ಕೆಲ್ಸ ಮಾಡಿಟ್ಟುತ ನಂಬಿಕೆ ಆತ್‌ಲೆ. ಮತ್ತೆ ಮತ್ತೆ ಕಾಗದನ ನೋಡ್ರೊ. ಹೌದು, ಸೀಮಾಂದೆ ಅಕ್ಷರಗ. ಒಬ್ಬಳೇ ಮಗಳುಂತ ಅಂಗೈಲಿಟ್ಟ್ ಸಾಕಿದ್ರೊ. ಆದರೆ ಆ ಹಕ್ಕಿ ಇಂದ್ ರೆಕ್ಕೆ ಬಂದ್ ತನ್ನ ಜೊತೆ ಹಕ್ಕಿಯೊಟ್ಟಿಗೆ ಹಾರಿ ಹೋಗಿತ್ತ್.

* * * * *

"ಹಲೋ ಮಿಸ್"

ತಿರ್‍ಗಿ ನೋಡ್ತ್ ಸೀಮಾ. ಪೊರ್ಲುನ ಲಕ್ಷಣವಂತ ಹೈದ ಅವಳ ಹಿಂದೆ ನಿತ್ತಿತ್ತ್. ಅನುಮಾನಲಿ ಹಲೋ...... ತೇಳ್ತ್ ಸೀಮಾ. ನೋಡಿಕೆ ಅಂವ ಈ ಊರಿಗೇ ಹೊಸಬತ ಕಾಂಬತಿತ್ತ್. ಮುಖಲಿ ನಗೆ ತುಂಬಿತ್ತ್.

"ನೀವ್ ಕಾಲೇಜಿಗೆ ಹೋಗ್ತಾ ವರ್ಳಿತ ಕಂಡದೆ"

"ಹೌದು"

"ನಿಮ್ಮ ಕಾಲೇಜ್‌ನ ಇಂಟರ್‌ವ್ಯೂಗೆ ಹೋಗ್ತಾ ವಳೆ. ನಂಗೆ ಸ್ವಲ್ಪ ಕಾಲೇಜ್ ಪ್ರಿನ್ಸಿಪಾಲ್ ರೂಂ ತೋರ್‍ಸಿರೆನಾ" ಆ ಐದ್ ನಿಮಿಷಲಿ ಅಂವ ನೂರೆಂಟ್ ಮಾತಾಡಿ ಬಿಟ್ಟಿತ್ತ್. ಸೀಮಾ ಅವನ ಮಾತುಗಾರಿಕೆಗೆ ಬೆರಗಾಗಿ ಹೋಗಿತ್ತ್.

ಸೀಮಾ ಆ ಹೈದಂಗೆ ಕಾಲೇಜ್‌ನ ಪ್ರಿನ್ಸಿಪಾಲ್ ರೂಂ ತೋರ್‍ಸಿ ಅಲ್ಲಿಂದ ಹೊರ್‍ಟು ಹೋತ್ ಕ್ಲಾಸಿಗೆ.

ಒಂದ್ ವಾರ ಕಳ್ದಿತ್ತ್. ಅಂದ್ ಎಲ್ಲಾ ವಿದ್ಯಾರ್ಥಿಗಳಿಗೂ ಕುತೂಹಲ. ತಮಗೆ ಹೊಸ ಲೆಕ್ಚರರ್ ಬಂದವೆತ ಪ್ರಿನ್ಸಿಪಾಲ್ ಹೇಳಿದ್ರೊ. ಎಲ್ಲವೂ ತಮ್ಮ ಹೊಸ ಲೆಕ್ಚರರ್‌ನ ಕಲ್ಪನೆಲಿ ಮುಳುಗಿದ್ರೊ.

ಲೆಕ್ಚರರ್ ಕ್ಲಾಸ್ ಒಳಗೆ ಬಾಕನ ಎಲ್ಲವ್ಕೂ ಎಲ್ಲಿಲ್ಲದ ಸಂತೋಷ. ಸೀಮಾನ ಮೈ ಮೃದುವಾಗಿ ಕಂಪಿಸಿತ್.

ಹೌದು ಅಂದ್ ನಾನ್ ಪ್ರಿನ್ಸಿಪಾಲ್ ರೂಂ ತೋರ್‍ಸಿದ್ದ ಹೈದ ಇಂದ್ ಕ್ಲಾಸ್‌ಗೆ ಲೆಕ್ಚರರ್ ಆಗಿ ಬಂದಿತ್ತ್.

ಅಶೋಕ್ ತನ್ನ ವಾಕ್ಚಾತುರ್ಯಂದ ಎಲ್ಲರ ಮನಸ್‌ನ ಸೂರೆಗೊಂಡಿತ್ತ್. ಸೀಮಾನೊಟ್ಟಿಗೆ ಸಲಿಗೆಂದ ಮಾತಾಡ್ತಿತ್ತ್.

ಸೀಮಂಗೆ ಪಾಠ ಕೇಳಿಕೆ ಮನಸ್ಸಾಗದೆ ಕ್ಲಾಸ್‌ಲಿ ಅವನ ಮುಖ ನೋಡಿಕಂಡೇ ಕುದ್ದಿರ್ತಿತ್ತ್. ಅಶೋಕನ ರೂಪನಂಗೆ ಅವನ ಹೆಸರ್ ಸಹ ಸುಂದರತ ಅಂದ್ ಕಣ್ತ್. ಸೀಮಾ ಈಗ ಸೀಮಾ ಆಗಿತ್ತ್‌ಲೆ. ಅವಳ ಮನ್ಸ್‌ನ ಅಶೋಕ ಅಪಹರಿಸಿದಂಗೆ ಅವ್ಳಿಗೆ ಅನುಭವ ಆಗ್ತಿತ್ತ್. ಕುದ್ದಲ್ಲಿ ನಿತ್ತಲ್ಲಿ ಅವನ ಸುಂದರ ಮುಖ, ಅವನ ತುಂಟ ಕಣ್ಣ್‌ಗ ಅವನ ಮಾತ್ ಕಣ್ಣಿಗೆ ಕಾಂಬತಿತ್ತ್.

ಯಾಕೆ ಹಿಂಗೆ ತಾನ್ ಇದ್ದಕ್ಕಿದ್ದಂಗೆ ದುರ್ಬಲಳಾಗಿಬಿಟ್ಟೋಳೆನಾ ಅನ್ಸಿತ್. ಮೊನ್ನೆ ಮೊನ್ನೆ ಮುಟ್ಟ ತನ್ನ ಮನಸ್‌ಲಿ ಪುರಷನ ಬಗ್ಗೆ ಆಸಕ್ತಿನೇ ಇತ್ತ್‌ಲೆ. ಈಗ ಅಶೋಕ ಅವಳ ಹೃದಯನ ಕೆದಕಿತ್ತ್. ಕೆದಕಿದ್ ಮಾತ್ರ ಅಲ್ಲ ದೊಡ್ಡ ದೊಡ್ಡ ಅಲೆನೇ ಎಬ್ಬಿಸಿತ್ತ್.

ಅಂದ್ ಕಾಲೇಜ್ ಯೂನಿಯನ್ ಡೇ. ಸೀಮಾ ಅಂತರ್ಜಾತೀಯ ಮದ್ವೆನ ಬಗ್ಗೆ ದೊಡ್ಡದಾಗಿ ಭಾಷಣ ಮಾಡಿ ಎಲ್ಲರ ಮೆಚ್ಚುಗೆ ಗಳ್ಸಿತ್ತ್. ದಿನಕಳ್ದಂಗೆ ಸೀಮಾ – ಅಶೋಕ ಹತ್ರ ಆಗ್ತಿದ್ದೊ. ಅವರಿಬ್ಬರ ಹೆಸರ್ ಕಾಲೇಜ್ ಗೋಡೆಲಿ ಕಾಂಬಷ್ಟು ಹತ್ರ ಆಗಿದ್ದೊ.

ಕಾಲೇಜ್ ಡೇ ಗೆ ಅಶೋಕ ಒಂದ್ ನಾಟಕ ರಚಿಸಿತ್ತ್. ಸೀಮಾ ಅದರ ನಾಯಕಿ. ಅಶೋಕನೇ ನಾಯಕ ಆಗಿತ್ತ್. ನಾಟಕ ಹೆಚ್ಚ್ ಕಮ್ಮಿ ಅವರಿಬ್ಬರಿಗೇ ಅನ್ವಯವಾದಂಗೆ ಇತ್ತ್.

ಅಂದ್ ಸೀಮಾ ಊಟ ಬೇಡತೇಳಿ ರೂಂಗೆ ಹೋಗಿ ಯೋಚನಾ ಮಗ್ನಳಾತ್. ಅಶೋಕ ತನ್ನನ್ನ ಪ್ರೀತಿ ಮಾಡ್ತಾ ಉಟ್ಟುತ ಅವ್ಳಿಗೆ ಆಗಲೇ ಗೊತ್ತಾಗಿತ್ತ್. ಅವನೂ ಅವಳೊಟ್ಟಿಗೆ ಮದ್ವೆಯಾಗೊನತ ಹೇಳಿತ್ತ್.

ಆದರೆ ಸೀಮಾಂಗೆ ಅವನ ಜಾತಿ ಪ್ರಶ್ನೆ ಕಾಡಿಕೆ ಶುರು ಆತ್. ಕಡೆಗೆ ತಾನ್ ಕಾಲೇಜ್‌ಲಿ ಮಾಡ್ದ ಭಾಷಣ ಗ್ಯಾನ ಆತ್. ತಾನ್ ಮಾಡ್ತಿರ್ದು ತಪ್ಪಲ್ಲ ಅನ್ಸಿತ್. ದೃಢ ನಿರ್ಧಾರ ಮಾಡಿ ನಿದ್ದೆಗೆ ಜಾರ್ತ್.

ಬೆಳಿಗ್ಗೆ ಏಳ್‌ಕನ ತನ್ನ ನಿರ್ಧಾರದ ಬಗ್ಗೆ ಅವ್ಳಿಗೆ ಬಾಳಾ ಬ್ಯಾನೆ ಆಕೆ ಶುರು ಆತ್. ಆದರೂ ಮನ್ಸ್ ಗಟ್ಟಿ ಮಾಡಿ ಅಶೋಕಂಗೆ ಅವ್ಳ ಒಪ್ಪಿಗೆ ತಿಳ್ಸಿತ್. ಪ್ರೇಮದ ಅಮಲ್‌ಲಿ ಅವ್ಳ ವಿವೇಕ ಜಾರಿತ್ತ್. ಅಪ್ಪ–ಅಮ್ಮಂಗೆ ಕಾಗದ ಬರ್ದ್ ಅಶೋಕನೊಟ್ಟಿಗೆ ಹೊರ್ಟಿತ್ತ್. ಅಶೋಕಂಗೂ ಮೈಸೂರಿಗೆ ವರ್ಗ ಆಗಿತ್ತ್.

* * * * *

ಫೋನ್ ಒಂದೇ ಸಮನೆ ಬಡ್ಕಂಡ್‌ಕನ ಮುತ್ತವ್ವಂಗೆ ಎದೆ ಧಸಕ್‌ತೇಳ್ತ್. ಈಗ ಯಾಕೊ ಎಲ್ಲದಕ್ಕೂ ಅವು ಹೆದರ್‍ದೇ ಆಗಿತ್ತ್. ಮುದ್ದ್‌ಲಿ ಸಾಕಿದ ಮಗ್ಳು ಕೈಕೊಟ್ಟು ಹೋದ ಮ್ಯಾಲೆ ಬದುಕೇ ಕಷ್ಟವಾಗಿಬಿಟ್ಟಿತ್ತ್.

ಗೋಡೆಲಿ ಇದ್ದ ಮಂಜುನಾಥ ಸ್ವಾಮಿನ ಫೋಟೊದತ್ತ ಕಣ್ಣ್ ಹೋತ್. ಮನ್ಸ್‌ಲಿ ದೇವ್ರನ್ನ ಗ್ಯಾನ ಮಾಡಿಕಂಡ್ ಫೋನ್ ತೆಗ್ತ್.

"ಅಮ್ಮಾ ನಾನ್ ಅಶೋಕ ಸೀಮಾನ ಗಂಡ, ಸೀಮಾಂಗೆ ಆಕ್ಸಿಡೆಂಟ್ ಆಗಿ ಸೀರಿಯಸ್ ಆಗುಟ್ಟು. ನಿಮ್ಮನ್ನ ನೋಡಕುತ ಆಸೆಪಡ್ತಾ ಉಟ್ಟು. ದಯವಿಟ್ಟು ಬನ್ನಿ" ತ ಹೇಳಿ ಆಸ್ಪತ್ರೆನ ಅಡ್ರೆಸ್ ಹೇಳ್ತ್.

ಮುತ್ತವ್ವಂಗೆ ಕೈಕಾಲೇ ಆಡ್ತ್‌ಲೆ. ಮಾಚಯ್ಯನವು ತೋಟಕ್ಕೆ ಹೋಗಿದ್ದೊ. ಬೇಗ ಅವ್ರ ಮೊಬೈಲಿಗೆ ಫೋನ್ ಮಾಡ್ತ್. ಅವು ತಕ್ಷಣ ಹೊರ್‍ಟು ಬಂದೊ.

ಮಗಳ್ನ ಮರೆಯಲಾರದೆ ಮರ್‍ತಿದ್ದ ಹೆತ್ತೊಡಲಿಗೆ ಒಂದ್ ಕ್ಷಣ ಅವ್ಳ ತಪ್ಪುಗಳೆಲ್ಲಾ ಮರ್‍ತ್ ಹೋಗಿ ಅವ್ರ ಸಿಟ್ಟ್ ಮಾಯವಾತ್. ಭಯಂದ ಅವರ ಶರೀರ ಕಂಪಿಸಿತ್. ಮಗಳಿಗೆ ಏನೂ ಆಗದಿರ್‍ಲಿತ ದೇವ್ರನ್ನ ಪ್ರಾರ್ಥನೆ ಮಾಡ್ದೊ. ಇಬ್ಬರೂ ಅಂದೇ ಮೈಸೂರಿಗೆ ಹೊರ್‍ಟೊ.

ಆಸ್ಪತ್ರೆಲಿ ಡಾಕ್ಟರ್‌ಂದ ವಿಷ್ಯ ತಿಳ್ದಿತ್ತ್. ಆಕ್ಸಿಡೆಂಟ್‌ಲಿ ಸೀಮಾ ತನ್ನ ಕಾಲ್‌ನ ಕಳ್ಕಂಡಿತ್ತ್. ಜೀವಕ್ಕೇನೂ ಅಪಾಯವಿಲ್ಲೆತ ಡಾಕ್ಟರ್ ಹೇಳಿದ್ದೊ.

ಅಪ್ಪ-ಅಮ್ಮನ ಕಾಂಬಕನ ಸೀಮಾ ಬಿಕ್ಕಿ ಬಿಕ್ಕಿ ಮರ್‍ಗಿಕೆ ಶುರು ಮಾಡ್ತ್. ಅಶೋಕ ಮಾತಾಡದೆ ನಿರ್ವಿಕಾರಲಿ ತಲೆ ತಗ್ಗಿಸಿ ನಿತ್ತಿತ್ತ್. ಇವರ್‍ನ ಕಂಡ್ ಮತ್ತೆ ಬನ್ನೆತ ಹೊರ್‍ಟು ಹೋಗಿತ್ತ್.

ಸೀಮಾ ಡಿಸ್‌ಚಾರ್ಜ್ ಆಕೆ ಮುಟ್ಟ ಮುತ್ತವ್ವ ಮಗಳ ಹತ್ರಾನೆ ಇದ್ದ್ ನೋಡಿಕಂಡೊ. ಮತ್ತೆ ಅವ್ಳನ್ನ ಮನೆಗೆ ಕರ್‍ಕೊಂಡ್ ಹೋಕೆ ತೀರ್ಮಾನ ಮಾಡ್ದೊ. ಅಶೋಕನ ಅಭ್ಯಂತರ ಏನೂ ಇತ್ತ್‌ಲೆ.

ಅಶೋಕಂಗೆ ಇದ್ರಂದ ಸಮಾಧಾನನೇ ಆತ್‌ತ ಅವ್ನ ಮುಖ ಹೇಳ್ತಿತ್ತ್. ಈಗೀಗ ಅಂವ ಸೀಮಾನ ಮಾತಾಡ್ಸಿಕೇ ಹೋಗ್ತಿತ್ತ್‌ಲೆ. ಮುತ್ತವ್ವನೊಟ್ಟಿಗೆ ವಿಚಾರ್‍ಸಿ ಹಂಗೇ ಕಾಲೇಜಿಗೆ ಹೊರ್‍ಟು ಹೋಗ್ತಿತ್ತ್. ಇದ್ರಂದ ಸೀಮಾ ಬಾಳಾ ಬೇಜಾರ್ ಮಾಡಿಕಂಡ್ ದುಃಖ ಪಡ್ತಿತ್ತ್. ಅವ್ಳಿಗೆ ತನ್ನ ತಪ್ಪುನ ಅರಿವಾಗಿತ್ತ್. ಇವ್ಳು ಸರಿಯಾಗಿ ಇರ್‍ಕನ ಅಶೋಕ ಬಾಳ ಕುಶಿಲಿ ಇರ್‍ತಿತ್ತ್. ಯಾಗ ಆಕ್ಸಿಡೆಂಟ್ ಆಗಿ ಅವ್ಳ ಕಾಲು ಹೋತೋ ಅಲ್ಲಿಂದ ಅವಂಗೆ ಅವ್ಳಲ್ಲಿ ಆಸಕ್ತಿ ಕಮ್ಮಿಯಾಗಿತ್ತ್.

ಒಂದ್ ತಿಂಗ ಕಳಿಯಕನ ಸೀಮಾ ಬರೀ ಮೂಳೆ ಚಕ್ಕಳ ಮಾತ್ರ ಆಗಿತ್ತ್.ಮನೆಗೆ ಬಂದ ಮ್ಯಾಲೆ ಮುತ್ತವ್ವನ ಆರೈಕೆಲಿ ಅವ್ಳು ಮೈಕೈ ತುಂಬಿಕಂಡ್ ಚೇತರ್‍ಸಿಕಂಡತ್.

ಅವ್ವು ಬಂದ ಮ್ಯಾಲೆ ಅಶೋಕ ಒಂದೆರಡು ಸಲ ಮಾತ್ರ ಫೋನ್ ಮಾಡಿ ವಿಚಾರಿಸಿತ್ತ್. ದಿನಕಳ್ದಂಗೆ ಯಾಗೊಳೊ ಒಮ್ಮೆ ಫೋನ್ ಮಾಡ್ದು ಮತ್ತೆ ಹಂಗೆ ಫೋನ್ ಸಹ ನಿತ್ತ್ ಹೋತ್.

ಕೊನೆಗೆ ಒಂದ್ ದಿನ ಫೋನ್ ಮಾಡ್ದ ಅಶೋಕ, ನನ್ನ ಬಾಳ್ ಪೂರ್ತಿ ಕುಂಟಿಯೊಟ್ಟಿಗೆ ಇರಿಕೆ ಆದುಲೆ. ನಂಗೆ ಬೇರೆ ಕಡೆ ವರ್ಗ ಆಗುಟ್ಟ್, ನಿನ್ನ ದಾರಿ ನೀನ್ ನೋಡಿಕತ' ಸೂಕ್ಷ್ಮವಾಗಿ ಹೇಳ್ತ್.

ಸೀಮಾ ದುಃಖಲಿ ಭೂಮಿಗಿಳ್ದ್ ಹೋತ್. ಅವಳಲ್ಲಿ ಒಂದು ರೀತಿನ ತಿರಸ್ಕಾರ ಮೂಡ್ತ್. ಮನಸ್‌ಲಿ ಛಲ ಹುಟ್ಟಿತ್ತ್. ತನ್ನ ಕಾಲ್ ಮ್ಯಾಲೆ ನಿಂತ್ ಸ್ವಾವಲಂಬಿ ಯಾಕೆ ತೀರ್ಮಾನ ಮಾಡ್ತ್.

* * * * *

ಶುರುನ ದಿನ ವೀಲ್ ಚೇರ್‌ಲಿ ಬಂದ ಇಕನಾಮಿಕ್ಸ್ ಲೆಕ್ಚರರ್‌ನ ಕಂಡ್ ವಿದ್ಯಾರ್ಥಿಗಳಿಗೆ ತಾತ್ಸಾರ ಮೂಡಿತ್ತ್. ಕ್ರಮೇಣ ಸೀಮಾ ಕಾಲೇಜಿನ ಜೀವನಾಡಿಯಾತ್. ಸೀಮಾ ಈಗ ಕಾಲೇಜ್‌ನ ಜನಪ್ರಿಯ ಲೆಕ್ಚರರ್. ಮಕ್ಕಳಿಗಂತೂ ಅಚ್ಚುಮೆಚ್ಚು. ಅವ್ಳ ಕ್ಲಾಸ್‌ನ ಯಾರೂ ಮಿಸ್ ಮಾಡ್ತಿತ್ತ್‌ಲೆ.

ತನ್ನ ಗತ ಜೀವನದ ಬ್ಯಾನೆನ ಮರಿಯಕೆ ತನ್ನ ಕಾಲೇಜ್ ವಿದ್ಯಾಭ್ಯಾಸನ ಮುಂದುವರ್ಸಿ ಇಕನಾಮಿಕ್ಸ್‌ಲಿ ಎಂ.ಎ. ಮಾಡಿತ್ತ್. ಅಂಗ ವಿಕಲಳಾದ ಸೀಮಾಂಗೆ ತಾನ್ ಓದಿದ ಕಾಲೇಜಿಗೆ ಲೆಕ್ಚರರ್ ಆಗಿ ಬಾದು ಕಷ್ಟ ಆತ್‌ಲೆ. ಯಾಕೆತೇಳ್ರೆ ಎಂ.ಎ ಲಿ ಅವ್ವು ಗೋಲ್ಡ್ ಮೆಡಲ್ ಪಡ್ದಿತ್ತ್.

ಈಗವಳು ಅಶೋಕನ ವಿರುದ್ಧ ಪ್ರತೀಕಾರದ ಮನೋಭಾವ ಹೊಂದಿತ್ತ್. ತನ್ನಂತಹ ನಿರ್ಭಾಗ್ಯ ಮಹಿಳೆಯರಿಗೆ ಸಹಾಯ ಮಾಡ್ತಿತ್ತ್.

ಅಂತರ್ಜಾತೀಯ ವಿವಾಹದ ಬಗ್ಗೆ ಮಾಡಿದ್ದ ಭಾಷಣ ಅವ್ವು ಕಳ್ದಿದ್ದ ಜೀವನನ ನೆನ್ಪ್ ನಿಟ್ಟುಸಿರ್ ಬಿಟ್ಟತ್. ಈಗ ಅವ್ಳಿಗೆ ಅರಿವು ಮೂಡಿತ್ತ್. ಆದರೆ ಕಾಲ ಮಿಂಚಿ ಹೋಗಿತ್ತ್. ಅವ್ವು ಅಪ್ಪ-ಅಮ್ಮಂಗೆ ಆಸರೆಯಾಕೆ ನಿರ್ಧಾರ ಮಾಡಿತ್ತ್.

* * * * *

✍ಕಟ್ರತನ ಲಲಿತಾ ಅಯ್ಯಣ್ಣ

# ಪರೀಕ್ಷೆ

ಕಾವೇರಪ್ಪತ್ತೇಳುವ ಶ್ರೀಮಂತಂಗೆ ಮುತ್ತಮ್ಮತ್ತೇಳುವ ರೂಪವತಿಯೂ, ವಿದ್ಯಾವಂತೆಯೂ ಆದ ಒಬ್ಬ ಮಗಳ್ ಇತ್ತ್. ಮದುವೆ ವಯಸ್ಸ್ ಬಂದ ಮಗಳಿಗೆ ಯೋಗ್ಯ ಗಂಡ್‌ನ ಹುಡ್ಕುದು ಅಪ್ಪ ಕಾವೇರಪ್ಪಂಗೆ ದೊಡ್ಡ ಚಿಂತೆ ಆಗಿತ್ತ್.

ಎಷ್ಟೋ ಗಂಡ್‌ಗ ಗೂಡೆ ಮುತ್ತಮ್ಮನ ನೋಡಿಕೆ ಬಂದರೂ ಮುತ್ತಮ್ಮಂಗೆ ಯಾವ ಗಂಡ್ ಕೂಡಾ ಹಿಡ್ಸಿತ್‌ಲೆ. ಹಿಂಗಿರ್‌ಕನ ಒಂದು ದಿನ ಅವರ ದೂರದ ಸಂಬಂಧಿಕರೇ ಆದ ಅವುಳಿಜವುಳಿ ಹೈದಂಗ ಬಂದ್ ಗೂಡೆ ಮುತ್ತಮ್ಮನ ಮೊದುವೆ ಆಗುವೆಂತ ಕೇಳಿಕಂಡವೆ. ಅವರ್ಲಿ ಒಬ್ಬನ ಹೆಸ್ರ್ ಜಯ ಇನ್ನೊಬ್ಬನ ಹೆಸ್ರ್ ವಿಜಯ. ಇಬ್ರೂ ಕೂಡಾ ರೂಪ ಮತ್ತೆ ವಿದ್ಯೆಲಿ ಮುತ್ತಮ್ಮಂಗೆ ಸರಿಹೊಂದುವಂಗೆ ಇದ್ದೊ. ಇಬ್ಬರ್ಲಿ ಯಾರ್ನ ಆಯ್ಕೆ ಮಾಡ್ದುಂತ ಅಪ್ಪ ಕಾವೇರಪ್ಪಂಗೆ ಹೊಳ್ತ್‌ಲೆ. ಹಾಗಿರ್‌ಕನ ಜಯ ಮತ್ತೆ ವಿಜಯನ ಪೈಕಿ ಯಾರ್ನ ಆಯ್ಕೆ ಮಾಡ್ದುಂತ ಮಗಳ್ ಮುತ್ತಮ್ಮಂಗೆ ನಿರ್ಧಾರ ತಕಣಿಕೆ ಅಪ್ಪ ಹೇಳ್ದೊ.

ಆಗ ಅವ್ಳು ಒಂದು ಕೆಲ್ಸ ಮಾಡ್ದೆ. ಏನ್‌ಂತೇಳ್ರೆ ಆ ಇಬ್ಬರ್ ಹೈದಂಗಳ ಕೈಗೆ ಒಂದೊಂದು ಸಣ್ಣ ಪೆಟ್ಟಿಗೆಗಳ್ನ ಕೊಟ್ಟ್ ಅವುಕೆ ಹೇಳ್ದೆ.... ನೋಡಿ.... ನೀವು ಈ ಪೆಟ್ಟಿಗೆನ ತಕಂಡ್ ಹೋಗಿ ನಾನ್ ಹೇಳುವ ವ್ಯಕ್ತಿಗೆ ಕೊಟ್ಟ್ ಅವರ ಕೈಂದ ಒಂದು ಚೀಟೀನ ತಕಂಡ್ ಬನ್ನಿ. ಆ ಮೇಲೆ ನನ್ನ ನಿರ್ಧಾರ ನಿಮಿಗೆ ತಿಳ್ಸಿನೆ ಅಂತ ಹೇಳ್ತ್. ಹಂಗೆ ಒಪ್ಪಿಕಂಡ ಹೈದಂಗ ಅವುಕೆ ಕೊಟ್ಟ ಪೆಟ್ಟಿಗೆನ ತಕಂಡ್ ಗೂಡೆ ಹೇಳ್ದಂಗೆ ಪ್ರತ್ಯೇಕ್ಕಾಗಿ ಬ್ಯಾರೆ ಬ್ಯಾರೆ ಊರಿಗೆ ಹೊರ್‍ಟೊ.

ಮಾರ್ಗ ಮಧ್ಯೆ ಜಯ ಹೈದ ಕೂತೂಹಲಂದ ಆ ಪೆಟ್ಟಿಗೆನ ತೆರ್ದ್ ನೋಡ್ದೆ. ನೋಡ್ಕನ ಅದರ್ಲಿ ತುಂಬಾ ವಜ್ರ ಇತ್ತ್. ಆಗ ಅವಂಗೆ ಖುಷಿ ಆಗಿ ಅಹಾ ಅದೃಷ್ಟಂತೇಳಿರೆ ಇದೆ. ಗ್ಯಾನ ಮಾಡದೇ ನಂಗೆ ಸಿಕ್ಕಿದ ಸಂಪತ್ತಿದ್. ಇದ್‌ನ್ನ ಬಿಡುದಾ....ಂತೇಳಿ ಆ ಪೆಟ್ಟಿಗೆ ಸಮೇತ ಪರಾರಿಯಾದೆ.

ಆದರೆ ವಿಜಯ ಮಾತ್ರ ಪೆಟ್ಟಿಗೆನ ಸೂಕ್ತ ವ್ಯಕ್ತಿಗೆ ತಲ್ಪಿಸಿ ಅವರ್‌ಂದ ಸ್ವೀಕೃತಿ ಚೀಟಿನ ತಕಂಡ್ ವಾಪಾಸ್ ಮುತ್ತಮ್ಮ ಗೂಡೆನ ಮನೆಗೆ ಬಂದದೆ. ಅದ್ನ

ಕಂಡ್ ಮುತ್ತಮ್ಮಂಗೆ ತುಂಬಾ ಖುಷಿ ಆತ್. ನಂಬಿಕೆಯ ಪರೀಕ್ಷೆಲಿ ಪಾಸಾದ ವಿಜಯನ ಮೊದುವೆ ಆಕೆ ಅವ್ಳು ಒಪ್ಪಿಕಂಡದೆ.

ಇದರ್‌ಂದ ಅಪ್ಪ ಕಾವೇರಪ್ಪಂಗೆ ಖುಷಿ ಆತ್. ಮಗ್ಳನ್ನ ಆಶ್ಚರ್ಯಂದ ಅಪ್ಪ ಕೇಳ್ದೆ... ಮಗಳೇ ಆ ಪೆಟ್ಟಿಗೇಲಿ ಏನಿತ್ತ್? ಜಯ ಯಾಕೆ ಇನ್ನೂ ವಾಪಾಸ್ಸ್ ಬಾತ್‌ಲೆ? ಅಂತ ಅಪ್ಪ ಕೇಳ್ತ್. ಅದ್ಕೆ ಮಗಳ್ ಮುತ್ತಮ್ಮ ಹೇಳ್ತ್: ಅಪ್ಪಾ, ಆ ಎರ್ಡ್ ಪೆಟ್ಟಿಗೇಲೂ ನಕಲಿ ವಜ್ರಗಳಿತ್ತ್. ದುರಾಸೆಗೆ ಬಲಿಯಾದ ಜಯ ವಾಪಾಸ್ಸ್ ಬಾತ್‌ಲೆ. ವಿಜಯ ವಿಶ್ವಾಸಕ್ಕೆ ನಂಬಿಕೆಗೆ ಅರ್ಹನಾದ ವ್ಯಕ್ತಿ. ಹಂಗಾಗಿ ನಾನ್ ವಿಜಯನನ್ನೇ ಮೊದುವೆ ಆಕೆ ಒಪ್ಪಿಕಣೆ ಅಂತ ಹೇಳ್ತ್. ಮತ್ತೆ ಒಂದು ತಿಂಗಳ ಒಳಗೆ ವಿಜಯನ ಜತೆ ಮುತ್ತಮ್ಮಳ ಮದುವೆ ಭಾರಿ ಜೋರಾಗಿ ವೈಭವದಿಂದ ನಡ್ತ್.

✍ಅಂಬೆಕಲ್ಲು ಸುಶೀಲ ಕುಶಾಲಪ್ಪ

## ಓ! ಮಾವಾ....

ಗಂಡ ಹೆಣ್ಣ್ ದಾರಿಲಿ ನಡ್ಕಂಡ್ ಹೋಕನ ಎದ್‌ರಿಂದ
ಒಂದು ಕತ್ತೆ ಬರ್‍ತಿದ್ದದೆ. ಅದರ ಕಂಡ್ ಅವ್ಳು ತನ್ನ ಗಂಡನ
ರೇಗುಸೋಕುಂತ ಹಿಂಗೆ ಹೇಳ್ದೆ:
ನೋಡಿ ನಿಮ್ಮ ನೆಂಟ್ರು ಬರ್‍ತಾ ಒಳೊ ಮಾತಾಡ್ಸಿ!
ಗಂಡ : ಓ ನಮಸ್ಕಾರ ಮಾವ ಲಾಯ್ಕ ಒಳರಿಯಾ?
ಮಗಳ್ನ ನೋಡ್ಕಂಡ್ ಹೋಕೆ ಬಂದರಿಯಾ?

✍ಅಂಬೆಕಲ್ಲು ಸುಶೀಲ ಕುಶಾಲಪ್ಪ

## ಕವನ ಜೊಂಪೆ

# ಮರ ಸೊಪ್ಪುನ ಉದ್ರ್ಸಿದೆ?!

ಅರ್ಗಾಲದ ಗಾರ್‌ಗೆ ಮರದ ಸೊಪ್ಪು ಉದ್ರ್‌ತ್ತ್
ಮರ ಬೋಳಾತ್, ಬಿಸ್‌ಲ್ ಗೆಲ್ಲ್‌ಗೆ ಬೀತ್
ಗೆಲ್ಲ್ ಬಿಸಿ ಆತ್, ಗೆಲ್ಲ್‌ನ ಹೊಟ್ಟೆಂದ
ಹೊಸ ಚಿಗ್‌ರ್ ಉಕ್ಕಿ ಉಕ್ಕಿ ಬಾತ್
ಮರದ ತುಂಬ ಮತ್ತೆ ಹೊಸ ಸೊಪ್ಪು.

ಮರ ಸೊಪ್ಪುನ ಉದ್‌ರ್ಸಿತ್ತ್
ಬರುವ ಮಳ್ಗಾಲನ ನೆನ್ಸಿ.
ಮರ ಸೊಪ್ಪುನ ಉದ್‌ರ್ಸಿತ್ತ್
ಜೆಡಿಕುಟ್ಟಿ ಬರುವ ಮಳೆಗೆ.
ಬುಡದ ಮೊಣ್ಣು ತೊಳ್ದೋಕೆ ಬೊತ್ತ್,
ಮೊಣ್ಣ್ ಮರದ ಸೊತ್ತ್.

ಬಾನ ಕೊಪ್ಪಾತ್, ಗಾಳಿ ಬೀಸಿತ್
ಬಾನ ಗುಡ್ಗಿತ್, ಸಿಡ್ಲ್ ಬೀತ್
ಆಲಿಕಲ್ಲ್ ಹೆರ್ಕ್‌ತಿದ್ದ ಮಕ್ಕ
ಮನೆ ಒಳಗೆ ಓಡಿ ಬಾಗ್ಲ್ ಸೆರೆಲಿ ಅಡ್‌ಂಗಿದೊ
ಮಳೆ ಒಣ್ಕೆ ತೋರಲಿ ಬೀತ್
ಹೊಸ ಮಳೆಗೆ ಮೊಣ್ಣ್ ಮೂರಿ ಎದ್ದತ್
ಅವ್ವ ಬೊಳ್ಳಿಗೆ ಅಂಗಳಕ್ಕೆ ಗುಡ್ಸಿದ
ಸೆಗ್‌ಣಿ ತೊಳ್ದ್ ಹೋತ್
ಆದರೆ ಅಂತಾ ಮಳೆಗೆ ಮರದಡಿನ ಮೊಣ್ಣ್ ತೊಳ್ದ್ ಹೋತ್ಲೆ
ಮರದಡಿನ ದರ್ಗ್ ಮರದಡಿನ ಮೊಣ್ಣುನ ಮುಚ್ಚಿತ್ತ್.
ತಲೆಗೆ ಹೋತ್ ಮರ ಯಾಕೆ ಸೊಪ್ಪು ಉದ್ರಿಸಿದೆಂತ

ಮಳ್ಗಾಲದ ಜೆಡಿ ಮಳೆಗೆ
ಆ ದೊಡ್ಡ ಬೊಳ್ಳ ಬಂದ ವರ್ಷ
ಹುಟ್ಟಿದ ಅಜ್ಜಿ ತೀರಿ ಹೋದೊ.
ಮಕ್ಕ – ಮೊರಿಗ ಅಜ್ಜಿನ ನೆನ್ಸಿ
ಬಿದ್ದ್ ಬಿದ್ದ್ ಮರ್‍ಲ್ಹೊ

ಅಜ್ಜಿ ಸತ್ತ ಹದ್ನಾರ್‍ನೆ ದಿನ
ಅಜ್ಜಿನ ಸೊಸೆ ಹೆತ್ತ್‌ತ್.
ಅದ್ ಪೊರ್‍ಲುನ ಗಂಡ್ ಕೂಸು
ಮಕ್ಕ ಮೊರಿಗ ಎದ್ದ್ ಬಿದ್ದ್ ಕೊಣ್ಡೊ.
ಮನೆ ತುಂಬಾ ನೆಗೆ!

ಮರಕ್ಕೂ ಬೇಕು ಹೊಸ ಹೊಸ ಚಿಗ್‌ರ್
ಮನೆಗೂ ಬೇಕು ಹೊಸ ಹೊಸ ಚಿಗ್‌ರ್
ಹಳ್ತ್ ಹೋಕು, ಹೊಸ್ತ್ ಬರೊಕು
ಸೊಪ್ಪು ಉದ್ರಿರೆ ಮರ ಸಾಯೊದುಲೆ
ಹೊಸ ಬಿಸ್ಲ್‌ನ ಹೊಸ ಗಾರ್‌ಗೆ
ಮೊಣ್ಣೊಳಗೆ ತಣ್ಣಂಗೆ ಮಲ್ಗಿದ್ದ ಹಳೆಬೇರ್‌ಲಿ
ಹೊಸಾ ಚಿಗ್‌ರ್, ಹೊಸ ಹೂವು, ಹೊಸ ಹಣ್ಣ್!

✍ ಎ.ಕೆ ಹಿಮಕರ

# ದೀಪ

ಕಣ್ಣಿಗೆ ಕಾಂಬಾ ಬೊಳ್ಪೆಂಬಾ ದೇವ್ರಾ ।
ದೀಪಕೆ ಕೈನಾ ಮುಗ್ದವೇ ....... ॥
॥ ಕಣ್ಣಿಗೆ ॥

ಯಾವುದೇ ಕಾರ್ಯ ಮಾಡಿಕೆ ಮುಂದೆ ।
ದೀಪಾನ ಇಸ್ಸಿ ಬೇಡುವೇ.... ॥
ಯಾಗೊಳು ನಾವು ಮರಿಯದೆ ನಿನ್ನಾ ।
ಬಕೂತಿಂದ ನೆನ್ಸುವೆ.... ॥
॥ ಕಣ್ಣಿಗೆ ॥

ಶಾಂತಿಧೂತ ವಿಷಯಧೂತ ।
ನೀನೇ ಅಂತಾ ಹೇಳುವೆ ॥
ಸತ್ಯ ಸಾಕ್ಷಿಗೆ ನಿನ್ನನೇ ಕರ್ದವೇ ।
ಉಳ್ಸಿ ಬೆಳ್ಸಿ ಬಾಳ್ಸು ಬಾ..... ॥
॥ ಕಣ್ಣಿಗೆ ॥

ಮೈಗೆ ಸುಖ ಸೌಖ್ಯ ಕೊಡು ನೀ.... ।
ಮನ್ಸಿಗೆ ತಂಪುನ ಬೊಳ್ಪುನಾ ತಾ.... ।
ಕತ್ತಲೆಂದಾ ಬೊಳ್ಪುನತ್ತಾ.... ।
ನಮ್ಮ ಕರಕ್ಕಂಡ್ ಹೋಗು ನೀ..... ॥
॥ ಕಣ್ಣಿಗೆ ॥

✍ಶೀಲಾ ಸೀತಾರಾಂ

# ಅನ್ನದಾತ

ನಟ್ಟ ಬಿಸ್ಲಿಗೆ ಜಗ್ಗದೆ ಮುಡ್ಡದೆ
ಯಾರ ಹಂಗಿಲ್ಲದೆ ಬದ್ಕಿದೆ
ಈ ಅನ್ನದಾತ

ಮಳೆ ಬಾರದೆ ಭೂಮಿ ಒಣ್ಗಿರು ಸರಿ
ಹೊಳೆ ತುಂಬಿ ನೆಲ ನೀರಾದರು ಸರಿ
ತನ್ನಷ್ಟಕ್ಕೆ ದುಡ್ಕಂಡ್ ಇದ್ದದೆ
ಈ ಅನ್ನದಾತ

ಯಾರ ದುಡ್ಡಿಗು ಕೈ ಒಡ್ಡದೆ
ಆಡಂಬರಕ್ಕೆ ಆಸೆ ಪಡದೆ
ತಕಂಡ್ ತಿಂಬೊದರ್‌ಂದ
ಬೆಳ್ಸಿ ತಿಂಬೊದು ಉತ್ತಮಾಂತ ಬದ್ಕಿದೆ
ಈ ಅನ್ನದಾತ

ಜಡತೆ ಜಂಜಾಟದ ಮೂಟೆನ ಮೂಲೆಗಿಸಿ
ಕೇಡು ವೈಷ್ಯಮ್ಯನ ಬದಿಗಿಸಿ
ಸಾಗರದಷ್ಟ್ ವಿಶಾಲಕೆ ಮನಸ್‌ನ ತೆಗ್ದಿಸಿ
ಒಡಲ ಮುತ್ತುನ ಸವಿನ ತಂಪುಲಿ
ಬದ್ಕಿದೆ ಈ ಅನ್ನದಾತ.

✍ಸಂಧ್ಯಾ ವಿನಯಕುಮಾರ್

# ನಮ್ಮತನ

ಊರುನ ಕಟ್ಟುವ ಗುಣ ಬಂದುಟ್ಟು
ಗೌಡಂಗೆ ಎಂದೂ ಛಲವುಟ್ಟು
ಸಾಕುವ ಅದೊಂದು ಗುಣವೂ ಉಟ್ಟು
ಎಲ್ಲಿಗೆ ಹೋದರೂ ಶತಸಿದ್ಧ ॥ ೧ ॥

ಸಾಕಿದೆ ಜನಗಳ ಲಾಯ್‌ಕಲಿ ಮತ್ತೆ
ತಾರತಮ್ಯಕೆ ಎಡೆ ಕೊಡದೆ
ಜಾತಿ ಧರ್ಮದ ಮೇಲೆ ಇಟ್ಟುಟು
ದೊಡ್ಡ ಗುಣಗಳ ಹೊರೆಗಳನೇ ॥ ೨ ॥

ತೊಂದರೆ ಕೊಟ್ಟರೆ ಸಾಧಿಸಿ ನೋಡ್ದು
ಹೆಂಗುಟ್ಟು ಅವನ ಒಳಗುಟ್ಟು
ಆಚಾರ ವಿಚಾರ ರೀತಿ ನಡತೆಲಿ
ಒಳ್ಳೆದ್ದ್ ಇದ್ದರೆ ಬುಡಿಕಿಲ್ಲೆ ॥ ೩ ॥

ಭೂಮಿ ತಾಯಿ ಜನಗಳ ಏಳ್ಗೆನ
ಮಾಡುವ ಮಟ್ಟಲಿ ಪಾಲಿಸುದು
ಯಾಕಣ್ಣ ಬೇಕು ಕೇಡ್ ಮತ್ಸರಗ
ಯಾರ ಒಳಿತಿಗೆ ತಿಳ್ಕನಿತ ॥ ೪ ॥

ನಮ್ಮನೆ ಮಕ್ಕಳ ತಿಳಿಯೊಕು ನೋಡಿ
ಅವ್ವಪ್ಪ ಮಕ್ಕಳ ಕೂಡಿಗೆಲಿ
ನಮ್ಮನ್ನ ನಾವು ಎಂದಿಗೂ ಹಿಂದೆ
ಮಾಡಿಕಾಗದ್ ಜೀವನಲಿ ॥ ೫ ॥

✍ಮಾಲಗೌ

# ಕುಶಾಲ್ ಹಾಡ್

ಹೆ:– ಆತ್ ಮದ್‌ವೆ ಆಗಿ ಇಂದ್‌ಗೆ ಹತ್ತ್‌ವರ್ಸ.... ಓ.....ಓ....
ಸರನ ಕೊಡ್‌ಸೊಕು ನೀವ್ ನಂಗೆ ಈ ವರ್ಸ
ಸರನ ಕೊಡ್‌ಸೊಕು ಈ ವರ್ಸ ನಂಗೀವರ್ಸ
ಈ ವರ್ಸ ಈ ವರ್ಸ ಈ ವರ್ಸವೇ.....॥

ಗಂ:– ದುಡಿಯಕೆ ನಾ ಒಬ್ಬನೆ ಮನೇಲಿ
ತಿಂಬ ಜನ ಲೆಕ್ಕ ಹಾಕ್ ಕಡೇಲಿ
ಬರೀ ಕಷ್ಟ, ಭಾರಿ ನಷ್ಟ, ಪರ್‌ದಾಟ ಯಾವಂಗೆ ಹೇಳ್‌ಲಿ?

ಹೆ:– ಹೆಣ್ಣ್‌ನ ನೋಡಿಕೆ ಆಗ
ಓಡಿಕಂಡ್ ಬಂದರಿ ಬೇಗ
ಮರ್‌ತರಿ ನಾ ಕೇಳ್‌ದನ, ಸರನ ಕೊಡೊಕು ಈಗ ॥

ಗಂ:– ಮಕ್ಕಳ ಫೀಸಿಗೆ ಬೇಕ್
ಬಾಡಿಗೆ ಕಾಸ್‌ನೂ ಕೊಡೊಕು
ಹರ್‌ದುಟು ನನ್ನ ಸುರಾಲ್, ಹರ್‌ದ್ ಚೂರ್ – ಚೂರ್ ॥

ಹೆ:– ಬೋನಸ್ ಬಂದ್‌ಟು ನೀವ್‌ಗೆ
ಇದೇ ಈ ದೀಪಾವಳಿಗೆ
ಕಳ್ಳ ನೆವ – ಪಿಳ್ಳೆ ನೆವ ಒಂದೂ ಬೇಡ ನಂಗೆ ॥

ಗಂ:– ಮಾಡ್‌ಬೇಡ ಹಟನ ನೀನ್
ಕುಸಿಲಿದ್ದರೆ ಬದ್‌ಕ್ ಜೇನ್
ಪೊರ್ಲ್‌ನ ಗೂಡೆಯೇ, ನೀನೇ ಬಂಗಾರದ ಮೀನ್ ॥

ಹೆ:– ಹೊಗಳಿಕೆ ಯಾವಂಗೆ ಬೇಕ್
ನಾ ಲಾಯ್‌ಕ ಕಂಡರೆ ಸಾಕ್
ದಮ್ಮಯ್ಯ ಹೈದನೇ, ಸರನ ನೀ ತಂದೆ ತರೊಕು ॥

ಗಂ:- ನನ್ನ ಕಷ್ಟ ನೀ ಹನಿಯ ಕೇಳ್
ಬಾಳ್‌ನ ಮಾಡ್‌ಬೇಡ ಗೋಳ್
ಹೊಂದಿಕಂಡ್ ಬದ್‌ಕಿರೆ ಸಂಸಾರ ಆಕಿಲೆ ಹೋಳ್ ॥

ಹೆ:- ಹಾಡಿಕಂಡ್ ಕುದ್ದ್‌ಕಣಿ ಒಳಗೆ
ಮಲ್‌ಕಣೆ ನಾ ಮಕ್ಕಳೊಟ್ಟಿಗೆ ಮನೆ ಹೊರಗೆ

ಗಂ:- ಆತ್ ಮದ್‌ವೆ ಆಗಿ ಇಂದ್‌ಗೆ ಹತ್ತ್ವರ್ಸ..... ಓ..... ಓ....
ಸರನ ಕೊಡ್‌ಸಿನೆ ನಾನ್ ನಿಂಗೆ ಈ ವರ್ಸ
ಸರನ ಕೊಟ್ಟನೆ ಈ ವರ್ಸ ನಿಂಗೀವರ್ಸ
ಈ ವರ್ಸ ಈ ವರ್ಸ ಈ ವರ್ಸನೇ......

ಜೊತೇಲಿ:- ಲಾಲ ಲಾಲ ಲಾಲ ಲಾಲಲ ಲಾ.......... ಲ.......... ಲಾ
ಲಾಲ ಲಲಲಲಾ ಲಾಲಲಾ ಲಲಲಾಲಾಲ
ಲಾಲಲಾ ಲಾಲಲಾ ಲಾಲಲಾ......... ಲಾ..........

**ಸೂಚನೆ :-**
(ಈ ರಾಗಲಿ ಹಾಡಿ :- "ಜೀವ ವೀಣೆ ನೀಡು ಮಿಡಿತದ ಸಂದೇಶ" ಹಾಡ್‌ನಂಗೆ.)

**✍ಕೊಟ್ಟಕೇರಿಯನ ಲೀಲಾ ದಯಾನಂದ**

# 1. ನೋಟ

ಫಳ ಫಳ ಹೊಳಿವ ನಕ್ಷತ್ರಗ ಆಕಾಶಕೆ ಪೊರ್ಲು
ಭತ್ತದ ತೆನೆಗ ಭೂಮಿಗೆ ಪೊರ್ಲು
ಹೂವುಗ ಅರಳ್‌ರೆ ನೋಡಿಕೆ ಪೊರ್ಲು
ಕಥೆ ಕವನ ಬರಿವ ಸಾಹಿತ್ಯ, ಕವಿಗ ಪೊರ್ಲು
ಜೆಡೆ ಉದ್ದ ಇದ್ದರೆ ಗೂಡೆಗ ಪೊರ್ಲು
ಹಾಳ್ ಅಬ್ಬೆಸಗ ಇರದ ಹೈದಂಗ ಪೊರ್ಲು
ಕೈತುಂಬ ಸಂಪಾದನೆ ಇದ್ದರೆ ಜೀವನ ಪೊರ್ಲು
ಮಕ್ಕ ಎರಡಿದ್ದರೆ ಸಂಸಾರನೇ ಪೊರ್ಲು
ಭಾಷೆಲಿ ನಮ್ಮ ಅರೆಭಾಷೆನೆ ಪೊರ್ಲು
ಬುಡೊಕು ನಾವೀಗ ದುಡ್ಡುನ ಮೊರ್ಲು.

# 2. ಬೇಜಾರ್

ಬೀಜದ ಮರ ಕಮ್ಮಿ ಕಡ್‌ದ್ ಹಾಕಿದೊ ನಾವು ರಬ್ಬರ್
ಮರಕಾಡ್ ಕಡ್‌ದ್ ಬೋಳುಗುಡ್ಡೆಲಿ ಹಾಕಿದೊ ನಾವು ರಬ್ಬರ್
ಸುತ್ತ ಮುತ್ತ ಕೇಳ್ತಿತ್ ಜೆ.ಸಿ.ಬಿ. ನ ದರ್ಬಾರ್
ಹೊಸ ನೆಂಟ್ರ ಬಂದೊವು ಕೇಳಿವೆ ಎಷ್ಟುಟ್ಟು ರಬ್ಬರ್
ಗೂಡೆ ಕೊಡಿಕೆ ಹಿಂದೆ ಜಾರುವೆ ಮರ ಇಲ್ಲರೆ ಐನೂರು
ಬೊಳ್ಪಿಗೆದ್ದ್ ಟ್ಯಾಪಿಂಗ್ ಮಾಡ್ವೆ ನಾವು ಇಬ್ರೊರು
ಹಾಲ್ ತೆಗ್‌ದ್ ಸೀಟ್ ಮಾಡಿ ಆಕನ ನಾವ್ಗೆ ಇಲ್ಲೆ ಉಸುರು.
ಇಷ್ಟೆಲ್ಲಾ ಕಾರ್‌ಬಾರಲಿ ನಾವು ತೆಗ್‌ದೊ ಒಂದು ಕಾರ್
ಮಂಜ ತಕೊಂಡೋಗಿ ಗುಂಡಿಗೆ ಹಾಕಿ ಮಾಡ್ತ್ ಅದರ ಚೂರು.
ಅಂತು ಇಂತು ಎಲ್ಲಾ ಕಡೆ ಉಟ್ಟು ಈಗ ರಬ್ಬರ್
ರೇಟ್ ಬಾಕನ ನಮ್ಮ ಖುಷಿಲಿದ್ದ ದರ್ಬಾರ್
ರೇಟ್ ಕಮ್ಮಿ ಆಕನ ನಿತ್ತುಟು ನಮ್ಮ ಕಾರ್‌ಬಾರ್.

✍ ಚಂದ್ರಮತಿ ಮುಕುಂದ

# ಮಕ್ಕ

ನನ್ನ ಬಾಳ ಬಾಣಲಿ
ಮೂಡ್ದೊ ಜೋಡಿ ಚುಕ್ಕೆಗ
ನನ್ನ ತಬ್ಬಿ ಸುಕಿಸುವ ಸುಹಾಸಿನಿಗ
ಪ್ರೀತಿ ಸಮುದ್ರಲಿ ತೇಲಿಸಿ ಮೀಸುವ ಹಂಸಗ
ಮುತ್ತಿ ಮುದ್ದಾಡುವ ಮುದ್ದು ಕಣ್ಮಣಿಗ

✍ದಿವ್ಯ ಜಯಪ್ರಕಾಶ್

# ನುಡಿಮುತ್ತು

ಗುಣ ಇಲ್ಲದಿದ್ದರೆ ರೂಪ ವ್ಯರ್ಥ
ನಮ್ರತೆ ಇಲ್ಲದಿದ್ದರೆ ವಿದ್ಯೆ ವ್ಯರ್ಥ
ಬಳಸದೇ ಇದ್ದರೆ ಧನ ವ್ಯರ್ಥ
ಹಸಿವು ಇಲ್ಲದಿದ್ದರೆ ಊಟ ವ್ಯರ್ಥ
ಪ್ರಜ್ಞೆ ಇಲ್ಲದಿದ್ದರೆ ಪ್ರತಿಭೆ ವ್ಯರ್ಥ

ನೀರಿನ ರುಚಿ ಗೊತ್ತಾದು ಅತೀ ಬಾಯಾರಿಕೆಯಾಕನ
ಹಣದ ಬೆಲೆ ಗೊತ್ತಾದು ಬಡತನ ಬಾಕನ
ಪ್ರೀತಿದ್ ಬೆಲೆ ಗೊತ್ತಾದು ನಾವು ಒಂಟಿಯಾಕನ

ಮಿತವ್ಯಯವಿಲ್ಲದೆ ಯಾರೂ ಸಿರಿವಂತರಾದುಲೆ
ಮಿತವ್ಯಯ ಸಾಧಿಸುವವು ಎಂದೂ ಬಡಂವ ಆದುಲೆ.

✍ಅಂಬೆಕಲ್ಲು ಸುಶೀಲ ಕುಶಾಲಪ್ಪ

# ನನ್ನವ್ವ

ಹಸ್ರ್ ಸೀರೆ ಉಟ್ಟು ಗುಡಿ ಹೊದ್ದ್ ಮಲ್ಗಿತ್ತ್ ನನ್ನವ್ವ
ಯಾರ ತಂಟೆ ತಕರಾರ್ ಇಲ್ಲದೆ ನೆಮ್ಮದಿಲಿ
ಬಾಕೆ ಸುರು ಮಾಡ್ದೋ ಒಬ್ಬೊಬ್ಬನೇ ಪ್ರವಾಸಿಗನಂಗೆ
ರೆಸಾರ್ಟ್, ಹೋಂ ಸ್ಟೇಗ ತಲೆ ಎತ್ತಿತ್ತ್ ಹಂಗಂಗೆ
ಕುಂದು ಕೊಡಿಲೂ ಮನೆಗ ಎದ್ದೋ
ಹಿಂದೆ ಮುಂದೆ ನೋಡದೆ ಜನಗ ಮುಗಿ ಬಿದ್ದೋ.
ತಲೆಗೆ ಹೊಕ್ಕಿತ್ಲೆ ಯಾರಿಗೂ ನನ್ನವ್ವ ಮಲ್ಗಿಟ್ಟು ತೆಳಿ
ಸೊಯ ಇದ್ದರೆ ಅಲ ನಮ್ಮವ್ಕೆ ಹೇಳಿ
ನಿದ್ದೆಲ್ಲಿದ್ದ ನನ್ನವ್ವ ಹಂಞ ಹೊರಳಾಡ್ತ್
ಅಷ್ಟೇ.... ಇಡೀ ಚಿತ್ರಣನೇ ಬದಲಾತ್
ಯಾರೋ ಮೈನ ಪಂರ್ಕಿ ಚಕ್ಕಳ ಜಾರಿಸಿದಂಗೆ
ಜಾರಿ ಹೋತ್ ಬೆಟ್ಟ ಗುಡ್ಡಗ ತೀರ
ಕೊಚ್ಚಿ ಹೋದ್ ಬೆಟ್ಟ, ಗುಡ್ಡ, ಮಣ್ಣ್ ನೀರಲ್ಲ
ಕನ್ಸ್ ಕಂಡ್, ಬೆವರ್ ಸುರ್ಸಿ, ಕಟ್ಟಿಕಂಡ ಬದ್ಕ್ ಎಲ್ಲ
ಜೀವನಾಡಿ ಜಲ ಮೂಲಗ ತೀರ,
ಜೀವನುಂಗೋ ಮಹಾಮಾರಿಯಾಗಿ
ಮನೆ, ಮಠ, ಗದ್ದೆ, ತೋಟ ಯಾವುದೂ ಲೆಕ್ಕಕೆ ಇಲ್ಲೆ ಅವ್ಕೆ
ಎಷ್ಟ್ ಪೊರ್ಲಿತ್ತ್ ನಮ್ಮೂರ್ ಅಂದ್,
ನೋಡಿಕೆ ಬೊತ್ತಾಗುಟು ಇಂದ್.
ಮಕ್ಕಳ ಕ್ಷಮಿಸ್ ಬುಡು ಅವ್ವ ಬೇಡ ಈ ಕೋಪ
ಇನ್ನಾದರ್ ಎಚ್ಚೆತ್ತ್ ಕಂಡವೆ, ತಾಳು ನೀ ಶಾಂತ ರೂಪ
ಮಲಗಲಿ ನನ್ನವ್ವ ಮತ್ತೆ ಶಾಂತಳಾಗಿ
ಬನ್ನಿ ನಾವೆಲ್ಲ ಸೇರಿ ಲಾಲಿ ಹಾಡೊಮೊ....
ಜೋ..... ಜೋ..... ಜೋsss......

✍ವಿನೋದ್ ಮೂಡಗದ್ದೆ

# ಹೋತ್‌ಗಡ! ಬಾತ್‌ಗಡ!

ಏನೆನೆಲ್ಲ ಹೋತ್ ಗಡ?
ಏನೆನೆಲ್ಲ ಬಾತ್ ಗಡ?
ಗದ್ದೆ ಬೇಸಾಯ ಹೋತ್‌ಗಡ
ಅಡ್ಕೆ ಕಾಪಿ ಬಾತ್ ಗಡ
ತರ್ಕಾರಿ ಊಟ ಹೋತ್‌ಗಡ
ಕಬಾಬ್ ಬಿರ್ಯಾಣಿ ಬಾತ್‌ಗಡ
ಮನೆಲಿ ಊಟ ಹೋತ್‌ಗಡ
ಬಾರಿಗೆ ಹೋದು ಬಾತ್ ಗಡ
ದನಕರ್ ಎಮ್ಮೆ ಹೋತ್‌ಗಡ
ಡೈರಿ ಹಾಲ್ ಬಾತ್ ಗಡ.
ಹುಲ್ಲಿನ ಮನೆ ಹೋತ್‌ಡ
ಕಾಂಕ್ರೀಟ್ ಮಾಡ್ ಬಾತ್‌ಗಡ
ಎಣ್ಣೆದೀಪ ಹೋತ್‌ಗಡ
ಕರೆಂಟ್ ದೀಪ ಬಾತ್‌ಗಡ
ಸಕಾರಿ ಸಾಲೆ ಹೋತ್‌ಗಡ
ಕಾನ್ವೆಂಟ್ ಸಾಲೆ ಬಾತ್ ಗಡ
ಕಚ್ಚೆ ಪಂಚೆ ಹೋತ್ ಗಡ
ಕೊಳವೆ ಪೇಂಟ್ ಬಾತ್ ಗಡ
ಅಪ್ಪ ಅವ್ವ ಹೋತ್‌ಗಡ
ಮಮ್ಮಿ ಡ್ಯಾಡಿ ಬಾತ್‌ಗಡ
ಕಾಗದ ಗೀಗದ ಹೋತ್‌ಗಡ
ಮೊಬೈಲ್ ಪೋನ್ ಬಾತ್‌ಗಡ
ಹೆಚ್ಚಿಗೆ ಮಕ್ಕ ಹೋತ್‌ಗಡ
ಲೆಕ್ಕಕೆ ಎರ್ಡೇ ಬಾತ್ ಗಡ
ನ್ಯಾಯ ನೀತಿ ಹೋತ್‌ಗಡ
ಅನ್ಯಾಯನೆ ಎಲ್ಲಾ ಬಾತ್‌ಗಡ
ಟೈಂಯಿ ಟುಂಯಿ ಇಂಗ್ಲೀಷ್ ಹೋತ್ ಗಡ
ಅರೆ ಬಾಸೆ ಮಾತ್ ಬಾತ್ ಗಡ
ಹೇಳಿಕೆ ಇನ್ನೂ ಉಟ್ಟುಗಡ
ಪುರ್ಸೊತ್ತು ಮಾತ್ರ ಇಲ್ಲೆಗಡ.

✍'ವ್ಯಾಸ'

# ಮೊದು ಮಗಳಿಗೆ ಸಿಂಗಾರ

ಭಾಮಿನಿ ಬಾರೆಲೆ ಸಿಂಗಾರಂದ
ಸಿಂಗಾರ ಪೀಠಕ್ಕೆ ಬಂಗಾರದಾರತಿ
ಸಿಂಗಾರ ಮಾಡಿಕಂಡ್ ಸಂಗೀತ ಹಾಡಿಕಂಡ್
ತಲೆಬಾಚಿ ಜಡೆ ಹಾಕಿ
ಜಡೆ ಮೇಲೆ ಹೂ ಮುಡ್ದ್‌ಕಂಡ್
ಭಾಮಿನಿ ಬಾರೆ ಸಿಂಗಾರ ಮಾಡಿಕಂಡ್
ಸಿಂಗಾರ ಪೀಠಕ್ಕೆ ಬಂಗಾರದಾರತಿ
    ಮೂಗಿಗೆ ಮೂಗುತಿಯನ್ನಿಟ್ಟ್ ಮೂಗುತಿಗೆ ಮುತ್ತನ್ನಿಟ್ಟ್
    ಭಾಮಿನಿ ಬಾರೆ ಸಿಂಗಾರ ಮಾಡಿಕಂಡ್
    ಸಿಂಗಾರ ಪೀಠಕ್ಕೆ ಬಂಗಾರದಾರತಿ
    ಸಿಂಗಾರ ಮಾಡಿಕಂಡ್ ಸಂಗೀತ ಹಾಡಿಕಂಡ್
ಕೆಮಿಗೆ ಓಲೆಯನ್ನಿಟ್ಟ್ ಓಲೆಗೆ ಜುಮುಕಿಯನ್ನಿಟ್ಟ್
ಭಾಮಿನಿ ಬಾರೆ ಸಿಂಗಾರ ಮಾಡಿಕಂಡ್
ಸಿಂಗಾರ ಪೀಠಕ್ಕೆ ಸಿಂಗಾರದಾರತಿ
ಸಿಂಗಾರ ಮಾಡಿಕಂಡ್ ಸಂಗೀತ ಹಾಡಿಕಂಡ್
    ಕತ್ತಿಗೆ ಚೈನ್ ಹಾಕಿಕಂಡ್ ಚೈನಿಗೆ ಹವಳನ್ನಿಟ್ಟ್‌ಕಂಡ್
    ಭಾಮಿನಿ ಬಾರೆ ಸಿಂಗಾರ ಮಾಡಿಕಂಡ್
    ಸಿಂಗಾರ ಪೀಠಕ್ಕೆ ಸಿಂಗಾರದಾರತಿ
    ಸಿಂಗಾರ ಮಾಡಿಕಂಡ್ ಸಂಗೀತ ಹಾಡಿಕಂಡ್
ಕೈಗೆ ಬಳೆ ಹಾಕಿಕಂಡ್ ಕೈ ಬೆರಳಿಗೆ ಉಂಗುರ ಹಾಕಿಕಂಡ್
ಭಾಮಿನಿ ಬಾರೆ ಸಿಂಗಾರ ಮಾಡಿಕಂಡ್
ಸಿಂಗಾರ ಪೀಠಕ್ಕೆ ಸಿಂಗಾರದಾರತಿ
ಸಿಂಗಾರ ಮಾಡಿಕಂಡ್ ಸಂಗೀತ ಹಾಡಿಕಂಡ್
    ಸೊಂಟಕೆ ಡಾಬು ಹಾಕಿಕಂಡ್ ಡಾಬುಗೆ ಗೆಜ್ಜೆ ಇಟ್ಟ್
    ಭಾಮಿನಿ ಬಾರೆ ಸಿಂಗಾರ ಮಾಡಿಕಂಡ್
    ಸಿಂಗಾರ ಪೀಠಕ್ಕೆ ಸಿಂಗಾರದಾರತಿ
    ಸಿಂಗಾರ ಮಾಡಿಕಂಡ್ ಸಂಗೀತ ಹಾಡಿಕಂಡ್
ಕಾಲಿಗೆ ಚೈನ್ ಹಾಕಿಕಂಡ್ ಬೆರಳಿಗೆ ಉಂಗುರ ಹಾಕಿಕಂಡ್
ಭಾಮಿನಿ ಬಾರೆ ಸಿಂಗಾರ ಮಾಡಿಕಂಡ್
ಸಿಂಗಾರ ಪೀಠಕ್ಕೆ ಸಿಂಗಾರದಾರತಿ
ಸಿಂಗಾರ ಮಾಡಿಕಂಡ್ ಸಂಗೀತ ಹಾಡಿಕಂಡ್

✍ಎಂ. ವಿ. ಮೋಹನ್ ಕುಮಾರ್

# ಕೊಡಗ್‌ನ ಜಲಪ್ರಳಯ

ಕೊಡಗ್‌ನ ನೆಲಲಿ ಈ ಪರಿಯಿಂದ್
ಊಹಿಸಿಕ್ಕಾಲೇ ನಮಿಗಿಂದ್
ಜಲಪ್ರಳಯ ಬಂದುಟು ನಮಿಗಿಂದ್
ಉಕ್ಕಿ ಹೋತ್ ನಮ್ಮ ಕೊಡಗಿಂದ್
ದೊಡ್ಡ ಸದ್ದ್ ಬಾತಂದ್
ಹೆದ್‌ರಿ ನೋಡುತಿದ್ದೋ ನಮ್ಮ ಜನರಂದ್.
ನೋಡ್ ನೋಡ್‌ತಿರ್‌ಕನೆ ಬೆಟ್ಟ ಬಾಯಿಬುಟ್ಟತಂದ್
ಜರ್‌ದ್ ಬಾತ್ ಹೇಳದೆ ಕೇಳದೆ ಬೆಟ್ಟ ಮನೆಗಂದ್
ಗದ್ದೆಯಿಲ್ಲೇ ತೋಟಯಿಲ್ಲೇ ಒಡ್‌ದ ಬೆಟ್ಟಲಂದ್
ಉಕ್ಕಿ ಬಾತ್ ಜಲಧಾರೆ ಅಂದ್
ಕೊಚ್ಚಿ ತಂದ್ ಕಲ್ಲು ಮಣ್ಣುನ ರಾಶಿನ ಹಾಕಿತಂದ್
ಎಲ್ಲ ಮುಚ್ಚಿಕಂಡ್ ಕೊಚ್ಚಿ ನಡ್‌ತಂದ್
ಬಡವ, ಬಲ್ಲಿದ ತೇಳ್‌ವ ಭೇದ ತೋರಿಸದಂದ್.
ಜೀವ, ಆಸ್ತಿ, ಮನೆ ಮಠ ನುಂಗಿ ಹೊರಟತಂದ್.
ದಾರಿಕಾಣದೆ ಎಲ್ಲಿಗೋದಿಂದ್?
ನಡುಗಿ ಹೋದೋ ಜನರಂದ್
ಬೆಚ್ಚಿಬಿದ್ದ ಜನಗ ನಡುಗುಡ್ಡೆಲಿ ನಿತ್ತಂದ್.
ರಾತ್ರಿ ಹಗಲ್‌ತೇಳದೆ ಹಿಡಿಜೀವ ಹಿಡ್‌ಕಂಡ್‌ಂದ್
ಧಾವಿಸಿ ಹೋದೋ ಅಲ್ಲಿಗೆ ರಕ್ಷಕರಂದ್
ಬದುಕಿಸಿ ತಂದೋ ಜನರ್‌ನಂದ್
ಜೀವದ ಹಂಗ್ ತೊರ್‌ದ್ ಹೋದಾ ಸಾಹಸಿಗರಿಗಿಂದ್
ನಮ್ಮ ಕೋಟಿ ನಮನ ಸಲ್ಲಿಕೆಯಿಂದ್
ಹಿಂದೂ ಮುಸ್ಲಿಂ ಕ್ರೈಸ್ತತೇಳದೆ ಅಂದ್

ಸಹಾಯ ಕೈ ನೀಡ್‌ದ ಜನಕೆ ಜೈಕಾರಾ ಇಂದ್
ದೇವರ್ ಕೊಡಲಿ ನೆಮ್ಮದಿ ಎಂದ್
ಜಾಗೃತ ಆದ ಸರ್ಕಾರಕ್ಕಂದ್
ಸಲ್ಯೂಟ್ ಹೊಡ್‌ದವೆ ಜನರಿಂದ್
ಜಾತಿಮತ ಪಕ್ಷಭೇದ ಎಲ್ಲ ಮರೆತಿಂದ್
ಒತ್ತಲಿ ತಮ್ಮ ಮತ ನಮ್ಮ ಜನರಿಂದ್
ನಮ್ಮ ರೈತನ ಕಷ್ಟನ ನೋಡಿಟ್ ಇಂದ್
ನಮ್ಮ ಸರ್ಕಾರಕ್ಕಿಂದು ನಮ್ಮ ಜೈಕಾರಯಿಂದ್
ಪ್ರಕೃತಿನ ಸಿಟ್ಟಿಗೆ ತುತ್ತಾದ ನಮ್ಮ ಜನರಿಂದ್
ಬರಿಕೈಲಿ ಕನವರಿಸುತ್ತಾಯಿಂದ್
ದೂರದೃಷ್ಟಿ ನೆಟ್ಟು ಬತ್ತಿದ ಕಣ್ಣಲಿಂದ್
ಬರುವಂತವರ ನೋಡ್‌ವೆ ಇಂದ್
ಓ ಮಾತೆ ನಮ್ಮ ಕೈ ಹಿಡಿಯೆಂದ್.
ಬೇಡಿಕಂಡವೆ ಕಾವೇರಿ ಮಾತೆನ ನಮ್ಮ ಜನರಿಂದ್.

✍ಸೆಟ್ಟೆಜನ ಗೀತ ಪದ್ಮನಾಭ

## "ಹಿಂಗಾರ" ಚಂದಾದಾರರ ತಿಳಿವಳಿಕೆಗೆ

ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ ಆಗ್‌ವ 'ಹಿಂಗಾರ' ಪತ್ರಿಕೆನ ಎಲ್ಲವು ತುಂಬ ಅಭಿಮಾನಂದ ತಕಂಡ್ ಪ್ರೋತ್ಸಾಹಿಸೊಕು. ನೀವೆಲ್ಲವು ಅದರ ಸದಸ್ಯತ್ವ ಪಡ್‌ಕಣೊಕು. ಅದರ ತ್ರೈವಾರ್ಷಿಕ ಚಂದಾ ದರ ರೂ. 200.00 ಆಗುಟು. ಬಿಡಿ ಪತ್ರಿಕೆಗೆ ರೂ. 20.00. ಸದಸ್ಯರಾದವುಕೆ ಪತ್ರಿಕೆನ ಅಂಚೆಲಿ ಕಳ್ಸಿವೆ. ನಿಮ್ಮ ಪರಿಚಯಿಸ್ತರಿಗೆ ಸದಸ್ಯರ್ ಆಕೆ ದಯಮಾಡಿ ಹೇಳಿ.

# ಪಾಕ

ಉಪ್ಪು ಕುಂದ್‌ಲಿ ಹುಟ್ಟಿ ಪಾಕಕ್ಕಾಗಿ ಹರ್‌ದ್
ಕಾವೇರಿ ಸೇರುವ ಹೊಳೆ ನಿನ್ನದವ್ವಾ
ಅವ್ವಾ ಕಾವೇರಿ ಸೇರುವ ಹೊಳೆ ನಿನ್ನದವ್ವಾ
ಅವ್ವಾ ನೀ ಪಾಕದವ್ವಾ, ನೀ ನಮ್ಮೆಲ್ಲರ ಅವ್ವಾ ಪಾಕದವ್ವಾ।

ನಿನ್ನ ಹಿಂದೆ ಬರುತ್ತೊಳೊ ಸಾವಿರಾರ್ ಮೀನ್‌ಗ
ನಿನ್ನ ಆಜ್ಞೆ ಇಲ್ಲದೆ ಒಂದು ನೂಲು ಮುಂದೆ
ಹೋದುಲವ್ವಾ ಒಂದು ನೂಲು ಮುಂದೆ ಹೋದುಲವ್ವಾ॥
ಅವ್ವಾ ನೀ ಪಾಕದವ್ವಾ ನಮ್ಮೆಲ್ಲರವ್ವಾ ಪಾಕದವ್ವಾ

ಭಕ್ತರ ರಕ್ಷಣೆಗಾಗಿ ಪಾಕಲಿ ನೀನಿಂದ್ ನೆಲೆ ನಿತ್ತ
ಧನುಸಂಕ್ರಮಣ ದಿನದಂದ್ ಭಕ್ತರ್‌ನ
ಕೈ ಬೀಸಿ ಕರಿತೊಳವ್ವಾ ಭಕ್ತರ್‌ನ ಕೈ ಬೀಸಿ ಕರಿತೊಳೊವ್ವಾ
ಅವ್ವಾ ನೀ ಪಾಕದವ್ವಾ, ನಮ್ಮೆಲ್ಲರವ್ವಾ, ಪಾಕದವ್ವಾ

ಜನುಮ ಜನುಮಗಳ ಹಿಂದೆ, ನಾ ಮಾಡ್ದ ಪಾಪ ತೀರಿಸಿಕ್ಕಾಗಿ
ನಾನಿಂದ್ ಬಂದ್ ನಿನ್ನ ಹೊಳೆಲಿ ಮ್ಯಿದ್ ನಿಂಗೆ ನಾ ಕಾಣಿಕೆ
ಒಪ್ಪಿಸುತೊಳೆವ್ವಾ ಅವ್ವಾ ನೀ ಪಾಕದವ್ವ ನಮ್ಮೆಲ್ಲರವ್ವಾ ಪಾಕದವ್ವಾ
ಅವ್ವಾ ನೀ ಪಾಕದವ್ವಾ, ನಮ್ಮೆಲ್ಲರವ್ವಾ, ಪಾಕದವ್ವಾ

✍ಮುಕ್ಕಾಟೀರ ವೇದಾ ದಯಾನಂದ

(ಅನುಭವ)

## ಪ್ರವಾಸ

# 'ಪುಟ್ಟ ಭಾರತ' ಬಾಲಿ

ಇತ್ತೀಚೆಗೆ ನಾವು ಇಂಡೋನೇಷಿಯಾದ ಬಾಲಿಗೆ ಪ್ರವಾಸ ಹೋಗಿದ್ದೊ. ಭಾರತಂದ ಸಾವ್‌ರಾರು ಮೈಲ್ ದೂರಲಿ ಇರುವ ಇಂಡೋನೇಷಿಯಾಲಿ ಹಿಂದೂ ಧರ್ಮದ ಪ್ರಭಾವ ತುಂಬಾ ಉಟ್ಟು. ಭಾರತದ ಸಂಸ್ಕೃತಿನ ಎದೆ ಬೊಡ್‌ತ ಅಲ್ಲಿ ಕೇಳ್ದೆ. ಹಿಂದೂ ಧರ್ಮದ ನಾಡಿ ಅಲ್ಲಿ ಮಿಡ್ಡದೆ. ಸಣ್ಣದ್ ದೊಡ್ಡದ್‌ತೇಳಿ ಸುಮಾರ್ ಹತ್ತ್ ಸಾವ್ರಂದೊಳೂ ಹೆಚ್ಚಿಗೆ ದ್ವೀಪಗ ಇಂಡೋನೇಷಿಯಲಿ ಒಳೊ. ಶ್ರೀವಿಜಯ, ಶೈಲೇಂದ್ರ, ಚೋಳ, ಮಾಯಾಪಹಿತ್ ಹೀಂಗೆ ಹಿಂದೂ ಬೌದ್ಧ ಸಾಮ್ರಾಜ್ಯಗ ಆಳಿ ಆ ದೇಶಕ್ಕೆ ಗಟ್ಟಿ ಆದ ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ನೆಲೆಗಟ್ಟ್‌ನ ಒದ್ಗಿಸಿ ಕೊಟ್ಟೊಳೊ. ಸುವರ್ಣಭೂಮಿತೇಳುವ ಹೆಸ್‌ರ್‌ಲಿ ಕ್ರಿಸ್ತ ಪೂರ್ವಂದಲೇ ಭಾರತದವ್ಕೆ ಆ ದ್ವೀಪಗಳ ಸಂಪರ್ಕ ಇತ್ತ್. ಬಂಗಾಳ, ಕೋರಮಂಡಲ ತೀರಂದ ಹೋದ ಯಾಪಾರಿಗ, ಮುಂದೆ ಅಲ್ಲಿಗೆ ಹೋದ ಭಾರತದ ವಿದ್ವಾಂಸರ್‌ಗಳಂದಾಗಿ ಹಿಂದೂ ಬೌದ್ಧ ಧರ್ಮ ಅಲ್ಲಿ ಆಳ ಆಗಿ ಬೇರ್ ಬುಟ್ಟಿತ್; ಕೃಷಿ, ಯಾಪಾರ, ಗುಡಿ ಕೈಗಾರಿಕೆ ಬೆಳ್ತ್; ರಾಮಾಯಣದ ನೆಳೊಲುಲಿ ಸಾಹಿತ್ಯ, ಸಂಗೀತ, ನೃತ್ಯ, ವಾಸ್ತುಶಿಲ್ಪ ವಿಕಾಸ ಹೊಂದಿತ್. ಹೆಚ್ಚೇಕೆ ಡಚ್ಚರ ಕೈಂದ ಇಂಡೋನೇಷಿಯದ ದ್ವೀಪ ಪಶ್ಚಿಮ ನ್ಯೂಗಿನಿನ ಬುಡ್ಸಿಕಂಬಕೆ ರಾಮಾಯಣದ ಪುರಾವೆ ಅವ್ಕೆ ಬೇಕಾತ್. ಅವರ ರುಪಯ್ಯತೇಳುವ ನೋಟುಲಿ ಗಣಪತಿ ಚಿತ್ರ ಉಟ್ಟು. ರಾಮಾಯಣ ಅವರ ರಾಷ್ಟ್ರೀಯ ಕಾವ್ಯ. ರಾಷ್ಟ್ರೀಯ ಗುರ್ತು ಗರುಡ. ಬೋರೊಬುದುರ್‌ಲಿ ಇರುವ ಬೌದ್ಧಚೈತ್ಯ ಮತ್ತೆ ಬಾಲಿಲಿ ಇರುವ ದೇವಸ್ಥಾನಗ ದೇಶದ ಸ್ಮಾರಕಗ. ಬಾಲಿ ನೃತ್ಯ ರಾಷ್ಟ್ರೀಯ ಸಾಂಸ್ಕೃತಿಕ ಕಲೆ. ಬಹುತ್ವನ ಮನ್ನುಸುವ ಗುಣ ಬಾಲಿಲಿ ಉಟ್ಟು. ಇದೇ ಆ ದೇಶದ ಏಕತೆನ ಗುಟ್ಟು. ಇಂತ ಸುವರ್ಣ ಭೂಮಿನ ಒಂದು ಅನರ್ಘ್ಯ ರತ್ನ ಬಾಲಿ. ಇದ್ ಲೆಸ್ಸರ್ ಸುಂಡಾ ಪ್ರಾಂತ್ಯದ ರಾಜ್ಯ.

ಬಾಲಿ ದೇಗುಲಗಳ ನಾಡ್. ಪೇಟೆತೇಳುವ ಅರ್ಥ ಕೊಡುವ "ಪುರ" ದೇವಸ್ಥಾನಗಳ ಸಮುಚ್ಚಯತೇ ಹೇಳಕ್. "ಪುರಕಯಾಂಗನ್" ಬೆಟ್ಟದ ಬುಡಲಿ

ಇರುವ ದೇವಸ್ಥಾನ. ಆದರೆ "ಪುರತೀರ್ಥ" ನೀರ್‌ನ ಕಾರಂಜಿ ದೇವಸ್ಥಾನ. "ಪುರದೇಸ" ಬ್ರಹ್ಮದೇವ್ರ, "ಪುರ ಪೂಸೆ" ವಿಷ್ಣುದೇವ್ರ, "ಪುರದಾಲೆಂ" ಶಿವ ದುರ್ಗೆಗಳ, "ಪುರ ಮೃಜಾಪತಿ" ಪ್ರಜಾಪತಿದೇವ್ರ, "ಪುರ ಸೆಗರ" ಸಮುದ್ರ ದೇವತೆನ ಆವಾಸ ಆಗಿ ಉಟ್ಟು, ನಾವು ಬಾಲಿಲಿ ಸುರೂಗೆ ನೋಡ್ದ್ ಪುರತೀರ್ಥ ದೇವಸ್ಥಾನ. ನೀರಾವರಿ ಇಲಾಖೆನ ಕೆಲ್ಸನ್ನೂ ಮಾಡ್ದು ಈ ದೇವಸ್ಥಾನದ ಹೆಚ್ಚುಗಾರಿಕೆ. ಪುರತೀರ್ಥದ ಕೊಳಲಿ ಹಾದ್ ಹೋವ ಸಾಕೆರಿಸನ್ ಹಳ್ಳದ ನೀರ್‌ನ ಸುತ್ತೊಳುನ ಹಳ್ಳಿಗಳ ಹೊಲ ಗದ್ದೆಗಳಿಗೆ ಬುಟ್ಟವೆ. ಈ ಕೆಲ್ಸದ ಜವಾಬ್‌ದಾರಿ ದೇವಸ್ಥಾನದ ಪೂಜೇರಿಗಳ್ದ್. ಈ ದೇವಸ್ಥಾನನ ಕ್ರಿ.ಶ 963 ರ್ಲಿ ವರ್ಮದೇವ ವಂಶದೋವು ಕಟ್ಟಿಸಿದೊ. ಇಲ್ಲಿನ ದೇವ್ರು ವಿಷ್ಣು. ರಾಜಧಾನಿ ದೆನ್ಪಸಾರ್‌ಂದ ನಲ್ವತ್ತು ಕಿ.ಮೀ. ದೂರದ ತಂಪಕ್ಸಿರಿಂಗ್‌ತೇಳುವ ಪಟ್ಟಣಲಿ ಈ ದೇವಸ್ಥಾನ ಉಟ್ಟು. ದೇವಸ್ಥಾನದ ಒಳೆಗೆ ಹೋಕನೇ ಪವಿತ್ರ ತೀರ್ಥನ ಹಿಡ್ದ್ ನಿತ್ತ್‌ಕಂಡ್ ಇರ್‌ವ ದೇವೇಂದ್ರನ ಬಾರೀ ಪೊರ್ಲುನ ಬಾಳಾ ದೊಡ್ಡ ಮೂರ್ತಿ ಉಟ್ಟು, ಹೊರೆಗೆನ ಈ ಅಂಜಣಾನ ದಾಟಿ ಒಳೆಗೆ ಹೋದರೆ ಅಲ್ಲಿ ಸೊರಂಗ್‌ತೇಳುವ ಬಣ್ಣ ಬಣ್ಣದ ಕಂಬಾಯಿಗಳ ಕೊಟ್ಟವೆ. ಅದರ ಉಟ್ಟುದ್ದೇ ತುಂಬಾ ಪವಿತ್ರ ಆದಂತ ಒಳಗೆನ ಅಂಜಣಾಕ್ಕೆ ಹೋಕು. ನಮ್ಮ ದೇಶಂದ ಭೇಟಿ ಕೊಡುವ ಹಿಂದುಗ ಅಲ್ಲದೆ ಪೊಡ್ವದ ದೇಶಗಳ್‌ಂದ ಬಾವ ಪುರ್ಬುಗ, ಚೀನಾಂದ ಬಾವ ಬೌದ್ಧಂಗ, ಜಾವ ಜಕಾರ್ತ ಸುಮಾತ್ರಂದ ಬಾವ ಇಂಡೋನೇಷ್ಯಾದ ಮಾಪ್ಳೆಗ ಇಲ್ಲಿನ ರೀತಿ ರಿವಾಜ್ಗಳ ಗೌರವಂದ ಪಾಲ್ಸಿವೆ. ಸೊರಂಗ್ ಸುತ್ತಿ ಸೊಂಟಕ್ಕೊಂದ್ ದಟ್ಟಿನ್ನೂ ಬಿಗ್ದ್ ದೇವಾಲಯದ ವಾಸ್ತುಶಿಲ್ಪನ ನೊಡಿಕೊಂಡ್ ಓಡಿಯಾಡ್ದು ಇಲ್ಲಿ ಸಾಮಾನ್ಯ ಸಂಗ್‌ತಿ.

ಒಳ ಅಂಜಣಲಿ ಧಾರ್ಮಿಕ ಕೆಲ್ಸಗ ನಡ್ವವೆ. ಆಗುಂಗ್ ಬೆಟ್ಟದ ಬುಡಲಿ ಹುಟ್ಟಿ ಹರಿವ ಸಾಕೆರಿಸ್ಸನ್ ಹಳ್ಳದ ನೀರ್‌ನ ಹಲೊವು ಕಾರಂಜಿಗಲ್ಲಿ ಕೊಳದ ಒಳೆಗೆ ಬುಟ್ಟವೆ. ಆ ಕಾರೆಂಜಿಗಳಿಗೆ ತಲೆ ಒಡ್ಡಿ ತೀರ್ಥಸ್ನಾನ ಮಾಡೊಕು. ನಾವು ಒಳೆಗೆ ಹೋಕನ ಹೆಚ್ಚಿನೊವು ಪಾಶ್ಚಾತ್ಯ ದೇಶದೊವೆ ಕಾರೆಂಜಿಗೆ ತಲೆ ಒಡ್ಡಿ ಮೀಯತಿದ್ದೊ. ಮಿಯ್ದ್ ಬೆಳ್ಳನೆ ಪಂಚೆ ಅಂಗಿ ಹಾಕಂಡ್, ತಲೆಗೆ ಒಂದು ಬೆಳ್ಳನೆ ಮುಂಡಾಸ್‌ನೂ ಕಟ್ಟಿ ದೇವಸ್ಥಾನದ ಪೌಳಿಲಿ ಕುದ್ದ್‌ಕಂಡ್ ಪೂಜೆಗೆ ಬೇಕಾದ ಸಾಮಾಗ್ರಿಗ ಇದ್ದ ಸಣ್ಣ ಕುಕ್ಕೆನ ಎದ್‌ರ್‌ಗೆ ಇಸಿಕಂಡ್ ಪೂಜೇರಿಗ ಹೇಳ್‌ದ ಹಾಂಗೆ ಪೂಜೆ ಮಾಡ್‌ತಿದ್ದೊ. ಅವೆಲ್ಲ ದೇವಸ್ಥಾನದ

ರೀತಿ ನೀತಿಗಳ ಮನ್ನಾರೆ ಪಾಲ್ಸಿ ಪ್ರವಾಸದ ಸುಖನ ಅನ್‌ಬವಿಸಿವೆತ ಅನ್ನಿತ್.

**ಬಾಲಿ ಗುಡಿ ಕೈಗಾರಿಕೆಗೆ ಹೆಸ್‌ರಾದ ಊರು. ಬೆಲೆ ಬಾಳುವ ಹರ್‌ಲ್‌ಗಳ ಕುದ್‌ರ್ಸಿ ಲೋಹದ ಒಡವೆಗಳ ತಯಾರ್ ಮಾಡ್‌ವ ಜಾಗೆಗೆ ಹೋಗಿ ನೋಡ್ಡೊ. ಸಣ್ಣ ಸಣ್ಣ ಕ್ಯಾಬಿನ್‌ಗಲ್ಲಿ ಕುದ್ದ ನೂರಾರ್ ಕುಂದಣಗಾರ್ರ್ ನಮುನಮೂನೆ ಆಭರಣಗಳ ಮಾಡ್ತಿದ್ದೊ. ಅದರ ಹಕ್ಕಲೇ ಇದರೆಲ್ಲ ಮಾರುವ ಬಾರೀ ಪೊರ್ಲುನ ಮಾರಾಟ ಮಳಿಗೆ ಇತ್ತ್. ಅಲ್ಲಿ ಇದ್ದ ವಾಸ್ತುಶಿಲ್ಪಿಗ ಇವು ತಯಾರ್ಸಿದ ಆಭರಣಗಳಾಂಗೇ ಪೊರ್ಲುಕಾಂಬತಿತ್ತ್. ಚಿನ್ನ ಬೆಳ್ಳಿ ಮತ್ತೆ ಬೇರೆ ಬೇರೆ ಲೋಹದ ಒಡವೆಗ, ಹರ್‌ಲ್ ಕುದ್‌ದ್ರ್ಸಿದ ವಾಚ್, ಪರ್ಸ್ ನೋಡಿಕೆ ಏನೋ ಲಾಯ್ಕ್ ಇತ್ತ್. ಆದರೆ ಬೆಲೆ ಮಾತ್ರ ವಿಪರೀತ ಜಾಸ್ತಿ.**

ಬಾಲಿಲಿ ಆ ದೇಶದ ಇತಿಹಾಸನ, ಸಂಸ್ಕೃತಿನ ಹೇಳುವ ಹಲೊವು ವಸ್ತು ಸಂಗ್ರಹಾಲಯಗ ಒಳೊ. ನಾವು ಅಲ್ಲಿ ಇಂತ ಎರ್ಡ್ ಜಾಗೆಗೆ ಭೇಟಿ ಕೊಟ್ಟಿದ್ದೊ. ಇವು ನಾಲ್ಕ್ ಉಪ್ಪುರ್ಕೆನ ಕಟ್ಟೋಣಗ. ರಾಜಾ ಮಹೇಂದ್ರವರ್ಮನಂತ ರಾಜರ್ಗಳ್‌ಂದ ಹಿಡ್ದ್ ಇತ್ತೀಚೆಗೆ ಡಚ್ಚರ ಆಡಳಿತಂದ ಬುಡ್ಸಿಕಂಡ ದಾಖಲೆಗ ಎಲ್ಲ ಅಲ್ಲಿ ಒಳೊ. ಒಳಗೆ ಹುಗುವ ದ್ವಾರ ದೊಡ್ಡ ಎರ್ಡ್ ಅರ್ಧ ಗಂಬುಗಳ್‌ಂದ ಕೂಡಿಟು. ಬೆರೀ ವಸ್ತು ಸಂಗ್ರಹಾಲಯತ ಅಲ್ಲ, ಅರಮನೆ, ಸರ್ಕಾರಿ ಕಟ್ಟಡಗ, ಉದ್ಯಾನಗ ಪ್ರತೀ ಒಂದರ ಬಾಗ್ಲೂ ಪೊರ್ಲುನ ಕೆತ್ತನೆಂದ ಕೂಡ್ದ ಅರ್ಧ ಗಂಬುಗಳೇ.

ತನಾವ್ ಲಾಟ್‌ತ ಒಂದು ದೇವಸ್ಥಾನ ಉಟ್ಟು. ಇದರ ಸಮುದ್ರದ ಪುಡೆನ ಬೆಟ್ಟದ ಮೇಲೆ ಕಟ್ಟಿಯೊಳೊ. ನೀರ್ ಹೊಡ್ದ್ ಹೊಡ್ದ್ ಬೆಟ್ಟ ಕೊರ್ದ್ ಹೋಗಿ ಅದೇ ಒಂದು ಕಲಾಕೃತಿನ ಹಾಂಗೆ ಕಂಡದೆ. ಮೊಣ್ಕಾಲ್ ಮುಳ್‌ಂಗ್‌ವಸ್ಟ್ ಇರ್ವ ನೀರ್‌ನ ದಾಟಿಕಂಡ್ ದೇವಸ್ಥಾನ ಇರ್ವ ಬೆಟ್ಟದ ಬುಡದ ಗುಹೆಗೆ ಹೋಕು. ಅಲ್ಲಿ ಬೆಟ್ಟದ ಬುಡಂದ ಬೀಳ್‌ವ ಶುದ್ಧ ತೀರ್ಥನ ಕುಡ್ಡೊ. ಪುರೋಹಿತಂಗ ನಾಗ ಸಂಪಿಗೆ ಹೂವ್ನ ಕೆಬಿಗೆ ಇಸಿ, ನೀರ್‌ಲಿ ಪದ್‌ನ್ದ ಅಕ್ಕಿನ ಬೊಟ್ಟುನ ಹಣೆಗೆ ಇಸಿದೊ. ಪೂಜೆ ಮಾಡ್ಲೊವ್ಕೆ ಮಾತ್ರ ಮೇಲೆನ ಗುಡಿಗೆ ಪ್ರವೇಶ. ನಾವು ಹೋದ ಇನ್ನೊಂದು ದೇವಸ್ಥಾನ ಉಲುವಾಟು. ಇದ್‌ಕೂಡಾ ಸಮುದ್ರ ಕರೆಲಿ ನಿರ್ಮಾಣ ಆಗುಟು. ಇಲ್ಲಿ ಸಮುದ್ರಂದ ಎದ್ದ್ ಎದ್ದ್ ಬಾವ ತೆರೆಗಳ ನೋಡ್‌ದೇ ಒಂದು ವಿಶಿಷ್ಟ ಅನುಭೂತಿ.

ಬಾಲಿ ಜನಗ ಧಾರ್ಮಿಕ ಪ್ರವೃತ್ತಿನೊವು. ಮೂರು ಹೊತ್ತೂ ಗಾಯತ್ರಿ

ಮಂತ್ರನ ಹೇಳಿವೆ. ಪ್ರತಿ ಮನೆ ಇಲ್ಲೆ ಸಾರ್ವಜನಿಕ ಕಟ್ಟೋಣಗಳ ಎದ್‌ರ್‌ಗೆ ನಮ್ಮಲ್ಲಿ ತೊಳ್ಸಿ ಕಟ್ಟೆ ಇದ್ದ ಹಾಂಗೆ ಸಣ್ಣ ಗುಡಿ ಇದ್ದದೆ. ವೊರ್ಸಕ್ಕೆ ಒಮ್ಮೆ ಮೌನ ವ್ರತ ಮಾಡಿವೆ. ಆಗ ಒಮ್ಮೆ ನೀವು ಬರೊಕು. ನಿಮ್ಮೊಟ್ಟಿಗೆ ಯಾರೂ ಮಾತಾಡಿಕೆ ಸಿಕ್ಕಿಕಿಲೆತ ನಮ್ಮ ಮಾರ್ಗದರ್ಶಿ ಪಾರ್ವತಿ ಹೇಳಿ ಅದೂ ನೆಗಾಡಿ ನಮ್ಮನ್ನೂ ನೆಗಾಡ್ಸಿತ್. ಇನ್ನೊಂದು ಮಾರ್ಗದರ್ಶಿ ಲೂಸಿ ಅದರ ಪೊರ್ಲುನ ಹಲ್ಲ್‌ಗಳ ತೋರ್ರ್ಸಿ ಹಲ್ಲ್‌ಗಳ ಸಪಾಟ್ ಮಾಡುವ ಸಾಗಿಂಗ್ ಪದ್ಧತಿ ಬಗ್ಗೆ ಹೇಳ್ತ್. ಕಾಮ ಕ್ರೋಧತೇಳ್ವ ಷಡ್ವೈರಿಗಳ ದೂರ ಮಾಡಿಕೆ ಈ ಸಂಸ್ಕಾರ ಗಡ! ಸಿಟ್ಟ್, ದ್ವೇಷ ಹೆಚ್ಚಾಕಂಡ್ ಇರ್‍ವ ಇಂದ್‌ನ ಕಾಲಲಿ ಅದರೆಲ್ಲ ದೂರ ಮಾಡ್ವ ಆಚರಣೆ, ಅದರ ಹಿಂದೆ ಇರ್‍ವ ಒಳ್ಳ ನಂಬಿಕೆ ಕುಶಿ ಕೊಟ್ಟತ್. ಮುಂದೊರ್‍ಸಿ ಲೂಸಿ ಹೇಳ್ತ್ "ನಾವು ಹಿಂದುಗ. ಕರ್ಮಫಲನ ನಂಬಿವೆ. ಈ ಜನ್ಮಲಿ ಅಲ್ಲರೂ ಮುಂದೆನ ಜನ್ಮಲಿಯಾರ್ ಒಳ್ಳ ಇಲ್ಲೆ ಕೆಟ್ಟ ಕೆಲ್ಸದ ಪಲ ಸಿಕ್ಕಿದೆ. ವಿದೇಶದವು ಇದರ ನಂಬುದುಲೆ. ನೀವೂ ನಂಬದಿರಿಕೆ ಸಾಕ್. ಆದರೆ ನಾವು ನಂಬಿವೆ. ಇದ್ ನಮ್ಮ ಸಂಸ್ಕೃತಿ. ನಮ್ಮ ಧರ್ಮ ಸಂಸ್ಕೃತಿನ ನಾವು ಪ್ರೀತಿಸಿವೆ, ಕಾಪಾಡಿವೆ". ಇಷ್ಟ್ ಹೆಮ್ಮೆ, ಇಷ್ಟ್ ಸ್ವಾಭಿಮಾನ ಇಲ್ಲದೆ ಇರ್ತಿದ್ದರೆ ಭಾರತಂದ ಸಾವ್‌ರಾರ್ ಮೈಲ್ ದೂರಲಿ, ಸಾವ್‌ರಾರ್ ವೊರ್ಸದ ಹಿಂದೆ ನೆಲೆ ನಿತ್ತ ಹಿಂದೂ ಧರ್ಮ, ಭಾರತದ ಸಂಸ್ಕೃತಿ ಅಲ್ಲಿ ಇಷ್ಟ್ ಲಾಯ್ಕ್‌ಲಿ ಕಂಗೋಳ್ಸಾತ್ತ ಇರ್ತಿತ್ತೊ ಇಲ್ಲೆನೋ.

ಬಾಲಿಲಿ ಶೇ. 85 ರಷ್ಟ್ ಜನಗ ಹಿಂದುಗ. ಒಳ್ದ ಹಾಂಗೆ ಮಾಪ್ಳೆಗ, ಪುರ್ಬುಗ, ಬೌದ್ಧಂಗ ಒಳೊ. ಬೇರೆ ಬೇರೆ ಧರ್ಮಗಳ ನಡುಲಿ ಸಹಬಾಳ್ವೆ ಹೇಂಗೆ ಉಟ್ಟುತ ನಮ್ಮ ಪ್ರವಾಸಿಗರ್‍ಲಿ ಒಬ್ಬ ಕೇಳ್ದೊ. ಆಗ ಲೂಸಿ ಹೇಳ್ತ್, "ನಾವು ಪರಸ್ಪರ ಗೌರವಂದ, ಹೊಂದಾಣಿಕೆಂದ ನಡ್ಕಂಡವೆ."

ಇಲ್ಲಿನ ಹೆಳ್ಮಕ್ಕಳಿಗೆ ಸೀರೆ ಉಡುವ ಅಭ್ಯಾಸ ಇಲ್ಲೆ. ಸೊರಂಗ್ ಸುತ್ತಿ, ಮೇಲೆ ಒಂದು ಅಂಗಿ ಹಾಕಿ ಸೊಂಟಕ್ಕೆ ಒಂದು ದಟ್ಟಿ ಬಿಗ್ದರೆ ಸಂಪ್ರದಾಯದ ಉಡ್ಗೆ ಆತ್. ಗಂಡ್‌ಸ್‌ಗಳೂ ಅಷ್ಟೆ, ಲುಂಗಿ ಉಟ್ಟು ಅಂಗಿ ಹಾಕಿ ಸೊಂಟಕ್ಕೆ ದಟ್ಟಿ ಕಟ್ಟಿ, ತಲೆಗೊಂದು ಮುಂಡಾಸ್‌ನ ಸುತ್ತಿಕಂಡವೆ. ದೇವಸ್ಥಾನಕ್ಕೆ ಹೋಕನ, ಬೇರೆ ವಿಶೇಷ ಸಂದರ್ಭಗಳ್ಲಿ ಇಂತ ಸಂಪ್ರದಾಯದ ಬಟ್ಟೆ ಹಾಕಿವೆ. ಒಳ್ದ ಹಾಂಗೆ ಮಾಮೂಲು ಸುರಾಲೂ, ಸಟರ್ೂ. ಹಣೆಗೆ ಕುಂಕುಮ ಬೊಟ್ಟು ಹಾಕುವ ಅಭ್ಯಾಸ ಇಲ್ಲೆ. ಆದರೆ ನೀರ್‍ಲಿ ಪುರ್ದ್‌ನ್ಸಿದ ಅಕ್ಕಿನ ಹಣೆಲಿ ಇಸಿಂಡವೆ.

ಕುಟುಂಬ ಜೀವನ ಹೆಚ್ಚಿ ಕಮ್ಮಿ ನಮ್ಮ ಹಾಂಗೆ. ಹೆಚ್ಚಿನೊವು ಮಾಂಸಹಾರಿಗ. ಸಸ್ಯಾಹಾರನೂ ರೂಢಿಲಿ ಉಟ್ಟು. ಆದರೆ ಅದ್ ಜಾತಿಗೆ ಸಮ್ಮಂಧ ಪಟ್ಟದ್ ಅಲ್ಲ. ತಮ್ಮ ಮೇಲೆ ಸ್ಥಳೀಯರ್ ಹಾಗೂ ಚೀನದವರ ಪ್ರಭಾವ ಉಟ್ಟುತ ಹೇಳ್ವ ಅವು ಪರಿಸರನ ಬಾರೀ ಮುತುವರ್ಜಿಂದ ನೋಡಿಕಂಡವೆ. ಬಾಲಿಗೆ ಜಗತ್‌ನ ಬೇರೆ ಬೇರೆ ಕಡೆಂದ ಪ್ರವಾಸಿಗ ಬಂದವೆ. ಇದೇ ಅವರ ಆದಾಯದ ಮೂಲ. ಒಳ್‌ದ ಹಾಂಗೆ ಬೇಸಾಯ, ಮೀನ್‌ಗಾರಿಕೆ ಮತ್ತೆ ಗುಡಿ ಕೈಗಾರಿಕೆಂದಲೂ ಆದಾಯ ಬಂದದೆ. ಜೀವಂತ ಜ್ವಾಲಾಮುಖಿ ಹಾಂಗೂ ಭಯೋತ್ಪಾದಕ ದಾಳಿಗ ಅವರ ನೆಮ್ಮದಿನ ಬೊದ್ಕ್‌ನ ಕರ್‌ಂಡಿ ಹಾಳ್ ಮಾಡಿವೆ. ಇಂಡೋನೇಷಿಯಾದ ಸುರುನ ಅಧ್ಯಕ್ಷ ಸುಕರ್ನೊ ಕಾಲಂದೊಳೂ ನಡ್ಕಂಡ್ ಬಂದ ಧಾರ್ಮಿಕ ಸಹಿಷ್ಣುತೆ ಮತ್ತೆ ಬಹುತ್ವಕ್ಕೆ ಮೂಲಭೂತವಾದಿಗ ಅಡ್ಡಿ ಮಾಡಿಕಂಡ್ ಒಳೊ. ಇಡೀ ದೇಶಲಿ ಎಷ್ಟೋ ದಾಳಿಗ ಆಗೊಳೊ. ಬಾಲಿ ಮೇಲೆ ಕೂಡಾ ದಾಳಿ ಆಗುಟುತ ಬಾರೀ ಬೇಜಾರ್‌ಲಿ ಲೂಸಿ ಹೇಳ್ತ್. ಇತ್ತೀಚೆಗೆ ಆಡಳ್ತ ವೈಸಿಕಂಡ ಜೋಕೋವಿದಾದೊ ಇಂಡೋನೇಷಿಯನ ಧರ್ಮಸಹಿಷ್ಣು ರಾಷ್ಟ್ರ ಆಗಿಯೇ ಒಳ್ಸಿಕಂಬಕೆ ಬೇಕಾದ ಕಾನೂನುಗಳ ತಯಾರ್ ಮಾಡಿಕಂಡ್ ಒಳೊತಳೂ ಅದ್ ಹೇಳ್ತ್.

ಪ್ರವಾಸದ ಕಡೇ ದಿನ ಶಾಪಿಂಗ್ ಅದ್ ಇದ್ ಮಾಡಿಕಂಡ್ ಮಧ್ಯಾಹ್ನ ಊಟ ಮುಗ್ಸಿ ದೆನ್ಪಸಾರ್ ವಿಮಾನ ನಿಲ್ದಾಣಕ್ಕೆ ಬಂದ್ ಬೀಳ್ಕಂಬಕನ ಎಲ್ಲರ ಮೋರೆನೂ ಚಪ್ಪೆ ಆಗಿತ್ತ್. ಆರ್ ದಿನಗಳ ಕಾಲ ಒಟ್ಟೊಟ್ಟಿಗೆ ತಿರ್‍ಗಾಡಿದ್ದೊ. ನಮ್ಮದ್ ಐವತ್ತಾರ್ ಜನರ ತಂಡ. ಒಂದು ನಾಲ್ಕೈದ್ ಜನರ ಬುಟ್ಟರೆ ಮತ್ತೆಲ್ಲವೂ ಗುರ್ತು ಪರ್ಚಯ ಇಲ್ಲದೊವೇ. ಆದರೆ ಈಗ ನಾವು ಎಲ್ಲವೂ ಒಂದು ಮನೆಯವರ ಹಾಂಗೆ ಆಗಿದ್ದೊ. ಪಾರ್ವತಿ ಮತ್ತೆ ಲೂಸಿ ಅಂತೂ ತೌರುಂದ ಬಂದವರ ಕಳ್ಸಿ ಕೊಡುವ ಹಾಂಗೆ ಕಣ್ಣ್‌ಲಿ ನೀರು ತುಂಬುಸಿಕಂಡ್ ಕೈ ಬೀಸಿದೊ.

✍ಲೀಲಾ ದಾಮೋದರ

ಚಿಂತನೆ

# ಮಾನವ ಜೀವನದ ಮಾರ್ಗಸೂಚಿ

"ಜಂತು ನರಜನ್ಮ ದುರ್ಬಲಂ"ಂತ ಹೇಳುವಂಗೆ ಮನುಷ್ಯನೂ ಪ್ರಾಣಿಗಳ ಗುಂಪಿಗೆ ಸೇರಿದವೆ. ಮನುಷ್ಯ ಜನ್ಮ ಸಿಕ್ಕುದು ಬಹಳ ಕಷ್ಟವೇ. ಮತ್ತೆ ಅಪರೂಪವೇ. ಪ್ರಾಣಿಗಳಲ್ಲಿ ಮನುಷ್ಯ ಬುದ್ಧಿ ಜೀವಿ. ಮನುಷ್ಯ ಬುದ್ಧಿಜೀವಿ ಆಗಿರ್ದುರಿಂದಲೇ, ಅವ ಹುಟ್ಟಿದಲ್ಲಿಂದ ಹಿಡ್ದ್ ಸಾಯುವ ತನಕ ಹಲವಾರ್ ಎಡರ್ ತೊಡರ್, ಕಷ್ಟ ನಷ್ಟ, ಸುಖ ದುಃಖಗಳ್ನ ಸಹಿಸಿಕಂಡ್ ಜೀವನ ಮಾಡಿಕಾದೆ. "ದೋಣಿ ಸಾಗಲೀ ಮುಂದೆ ಹೋಗಲಿ, ದೂರ ತೀರವ ಸೇರಲೀ, ಬೀಸುಗಾಳಿಗೆ ಬೀಳುತ್ತೇಳುತಾ, ತೆರೆಯ ಮೇಗಡೆ ಹಾಯಲಿ" ಹೇಳುವಂಗೆ ಮನುಷ್ಯನ ಜೀವನ 'ದೋಣಿ ನೀರ್‌ಮೇಲೆ ತೇಲುವಂಗೆ. ದೋಣಿ ಯಾಗ ಮುಳುಗಿದೆಂತ ಹೇಳುದು ಯಾರಿಗೂ ಗೊತ್ತಾದ್ಲೆ. ಹಂಗೆನೇ ಮನುಷ್ಯನ ಪ್ರಾಣ ಯಾಗ ಹೋದೆಂತ ಹೇಳಿಕೆ ಯಾರಿಗೂ ತಿಳಿಯಕಿಲ್ಲೆ. ದೇವರಿಗೆ ಒಬ್ಬಂಗೆ ಗೊತ್ತು.

ನಮ್ಮ ಜೀವನದ ಬಹುಮುಖ ಪ್ರತಿಭೆಗಳಿಗೆ ಕೆಲವು ಉದಾಹರಣೆಗಳ ಕೊಟ್ಟ್ ವಿವರಿಸಿಕೆ ಆದೆ. ದೇವುರು ಮನುಷ್ಯಂಗೆ ಜನ್ಮ ಕೊಡ್ಕನ ಒಟ್ಟಿಗೆ ಕತ್ತೆಗೆ, ನಾಯಿಗೆ, ಗೂಬೆಗೆ ಜನ್ಮಕೊಟ್ಟ್ ಈ ಎಲ್ಲಾ 4 ಪ್ರಾಣಿಗಳಿಗೆ 40 ವರ್ಷ ಆಯುಷ್ಯ ಕೊಟ್ಟತ್‌ಗಡ. ಆಗ ಕತ್ತೆ ಹೇಳ್ತ್‌ಗಡ ನಂಗೆ 40 ವರ್ಷ ಆಯುಷ್ಯ ಆದರೆ, ನಾನ್ ಮನುಷ್ಯನ ಸಾಮಾನ್ ಮೂಟೆಗಳ ಭಾರ ನನ್ನ ಬೆನ್ನ್ ಮೇಲೆ ಬಿದ್ದ್ ಬಿದ್ದ್, ನನ್ನ ಬೆನ್ನ್ ಮೂಳೆ ಮುರ್ದ್ ನಾನ್ ಸತ್ತೇ ಹೋನೆ, ಅದರ್‌ಂದ ನಂಗೆ 20 ವರ್ಷ ಆಯುಷ್ಯ ಸಾಕ್‌ಂತ ಹೇಳ್ತ್. ಅದಕ್ಕೆ ದೇವುರು ಒಪ್ಪಿಕಂಡ್ ಕತ್ತೆಗೆ 20 ವರ್ಷ ಆಯುಷ್ಯಂತ ಹೇಳ್ತ್. ಆಗ ನಾಯಿ ಸನಾ ನಾನ್ ಮನೆ ಯಜಮಾನನ ಮನೆ ಕಾದ್ ಕಾದ್ ಮೊಲ್ಗಿದಲ್ಲೆ ಸತ್ತ್ ಹೋನೆ. ಅದರ್‌ಂದ ನಂಗೂ 20 ತ್ತೇ ವರ್ಷ ಆಯುಷ್ಯ ಸಾಕ್‌ಂತ ಹೇಳ್ತ್. ಒಹೋ ಹಂಗೆನಾ ನಿಂಗೂ 20 ವರ್ಷ ಆಯುಷ್ಯ ಸಾಕಾ? ಸರಿ ಹಂಗಾದರೆ, ನಿಂಗೂ 20ತ್ತೇ ವರ್ಷ ಆಯುಷ್ಯಂತ ಹೇಳ್ತ್. ಇದರೆಲ್ಲಾ ಕೇಳ್ಸಿಕಂಡ್ ಗೂಬೆ ನಂಗೆ ಹಗ್‌ಲ್ ಹೊತ್ತು ಕಣ್ಣ್ ಕಾಂಬೊದಿಲ್ಲೆ, ಬೇಟೆಯಾಡಿಕೆ ಆದುಲ್ಲೆ. ಮರದ ಕೊಂಬು ಮೇಲೆ ಕಣ್ಣ್ ಮುಚ್ಚಿ ಕುದ್ದ್ ಕುದ್ದ್ ಮರಂದ ಕೆಳಗೆ ಬುದ್ದ್ ಸತ್ತ್ ಹೋನೆ. ಅದರ್‌ಂದ ನಂಗೂ 20 ವರ್ಷ ಆಯುಷ್ಯ ಸಾಕ್‌ಂತ ಹೇಳ್ತ್. ಆಗ ದೇವುರು

ಸರಿಂತ ಹೇಳಿ ಗೂಬೆಗೂ 20 ವರ್ಷ ಆಯುಷ್ಯಂತ ಹೇಳ್ತ್.

ಕಡೇಗೆ ಮೊನ್ಸನ ದೇವುರು ನಿನ್ನ ಕತೆ ಏನ್‌ಂತ ಕೇಳ್ತ್. ಆಗ ಮೊನ್ಸ ನಂಗೆ 100 ವರ್ಷ ಆಯುಷ್ಯ ಆದರೂ ತೊಂದರೆ ಇಲ್ಲೆ. ಕಾಯಕವೇ ಕೈಲಾಸಂತ ಹೇಳುವಂಗೆ ನಾನ್ ಗೈದ್ ತಿಂದ್ ಹೇಂಗಾದರೂ ಬೊದಿಕಿನೇಂತ ಹೇಳ್ತ್. ಆಗ ದೇವುರು ಸರಿಂತ ಹೇಳಿ ಮನುಷ್ಯಂಗೆ 100 ವರ್ಷ ಆಯುಷ್ಯ ಇರಲೀಂತ ಹೇಳಿ ಆಶೀರ್ವಾದ ಮಾಡಿ ಮಾಯ ಆತ್.

ಮನುಷ್ಯಂಗೆ ದೇವುರು ಕೊಟ್ಟ ಒರಿಜಿನಲ್ 40 ವರ್ಷ ಪ್ರಾಯಲಿ ತನ್ನ ಬಾಲ್ಯಲೀ ತನ್ನ ಸ್ನೇಹಿತರೊಟ್ಟಿಗೆ ಆಟ, ಪಾಠ, ವಿದ್ಯಾಭ್ಯಾಸ. ವಿದ್ಯಾಭ್ಯಾಸ ಮುಗ್ದ್ ಮೇಲೆ ಉದ್ಯೋಗ, ಪ್ರಾಯಕ್ಕೆ ಬಂದ ಮೇಲೆ ಮೊದುವೆ, ಆ ಮೇಲೆ ಕೌಟುಂಬಿಕ ಜೀವನ, ಸಂಸ್ಕೃತಿ, ಪದ್ಧತಿ ಪರಂಪರೆಗಳಿಗೆ ಅನುಸಾರವಾಗಿ ನಡುದು ಕೊಂಬೊದು. ಮಕ್ಕಳ ಪಡ್ದ್ ಸಂತೋಷ ಪಡ್ಕಂಬೊದು. ಅಲ್ಲಿಗೆ 40 ವರ್ಷ ಆಯುಷ್ಯ ಮುಗ್ದ್‌ದೆ. ಇನ್ನ್ ಕತ್ತೆನ 20 ವರ್ಷ ಸೇರಿಸಿಕಂಡರೆ, ಅಲ್ಲಿಗೆ 60 ವರ್ಷ ಆದೆ. ಈ 60 ವರ್ಷ ಪ್ರಾಯದವರೆಗೆ ತನ್ನ ಮಕ್ಕಳ ಪೋಷಣೆ, ಅವುಕ್ಕೆ ವಿದ್ಯಾಭ್ಯಾಸ, ಉದ್ಯೋಗಕ್ಕೆ ಸೇರ್ಸುದು, ಅವರ ಮದುವೆ ಮುಂಜಿ, ಪಿಳ್ಳೆಕಳ ಪೋರ್ಲು ನೋಡುದು, ಮಕ್ಕಳಿಗೆ ಆಸ್ತಿ ಪಾಸ್ತಿ ಮಾಡಿಕೊಡುದು, ಮಕ್ಕಳಿಗೆ ಬೇರೆ ಬೇರೆ ಒಂದೊಂದು ಮನೆಕಟ್ಟಿಸಿಕೊಡುದು. ಹಿಂಗೆ ಕತ್ತೆ ದುಡ್ದಂಗೆ ದುಡ್ದ್ ಆಕನಾ 60 ವರ್ಷ ಪ್ರಾಯ ಎತ್ತಿತ್. ಇನ್ನ್ ನಾಯಿನ 20 ವರ್ಷ ಆಯುಷ್ಯನ ಸೇರಿಸಿರೆ, 80 ವರ್ಷ ಪ್ರಾಯ ಆದೆ. ಈಗನಾ ಕಾನೂನು ಪ್ರಕಾರ 60 ವರ್ಷ ಆದ ಮೇಲೆ ಹಿರಿಯ ನಾಗರಿಕರ ಗುಂಪುಗೆ ಸೇರಿದಂಗೆ ಆತ್. ಅಲ್ಲಿಗೆ ಅಪ್ಪನ ಅವ್ವನ ಕೆಲಸ ಹೆಚ್ಚಿನಾಂಶ ಮುಗ್ದ್‌ದಂಗೆ ಆತ್.

ಮಕ್ಕಳಿಗೆ ಅಪ್ಪ ಮಾಡಿದ ಆಸ್ತಿಗಳ ಪಾಲ್ ಪಂಕ್ತಿ ಕೊಟ್ಟ್ ಆತ್. ಇನ್ನ್ ಹೇಳೊಕೊ ಮಕ್ಕಳದೇ ದರ್ಬಾರ್. ಅತ್ತೆಗೊಂದು ಕಾಲ, ಸೊಸೆಗೊಂದು ಕಾಲಂತ ಹೇಳುವಂಗೆ ಮಕ್ಕ ಸೊಸೆದೆ ಕೈ ಮೇಲೆ. ಈಗಿನ ಕಾಲಲೀ ಹೆಂಗ್ಸರ್ ಹೇಳಿದಂಗೆ ಗಂಡ್ಸರ್ ಇರುದು ವಾಡಿಕೆ. ಇನ್ನ್ ಅವರ ಮಕ್ಕ, ಅವರ ನೆಂಟರಿಷ್ಟರ್, ಬಂಧು ಬಳಗ, ಮದುವೆ ಮುಂಜಿ, ಹಬ್ಬ ಹರಿದಿನ, ನಾಮಕರಣ ಮುಂತಾದ ಸಮಾರಂಭಗಳಿಗೆ ಹೋದು ಸೊಸೆ ಮಕ್ಕಳಿಗೆ ಜೋರಾದೆ. ಇವು ಹಿಂಗೆ ಹೊರಗಡೆ ಹೋಕನ ಅವರ ಮಕ್ಕಳ ಮರಿಗಳ ಎಚ್ಚರ ನೋಡಿಕಂಬೊದು ಅಪ್ಪನ ಅವ್ವನ ಕೆಲಸ. ಎಲ್ಲಿಯಾದರ್ ಮಕ್ಕ ಮನೆ ಜಗಲ್‌ಂದ ಕೆಳಗೆ ಬಿದ್ದ್ ಗಾಯ ಆದರೆ

ಅಪ್ಪನೂ ಅವ್ವನೇ ಹೊಣೆ. ಮಕ್ಕಳಿಂದ ಒಂದೆರಡ್ ಬೈಗಳ ಬೇರೆ. ಹಿಂಗೆ 60 ವರ್ಷ ಪ್ರಾಯ ಆದ ಮೇಲೆ ನಾಯಿ ಮನೆ ಕಾಯುವಂಗೆ ಕಾಯೊದೇ ಗತಿ.

ಇನ್ನ್ 80 ರಿಂದ 100 ವರ್ಷ ಪ್ರಾಯ ಆದವುಕ್ಕೆ ಸಾಮಾನ್ಯ ಕಣ್ಣ್ ಕಾಂಬೊದು ಕಿವಿ ಕೇಳುದು ಅಷ್ಟಕಷ್ಟೆ. ಗಾಂಧೀಜಿಯವು ಹೇಳ್ದಂಗೆ ಕೆಟ್ಟದರ ನೋಡುದು ಬೇಡ ಕೆಟ್ಟ ವಿಷಯಗಳ ಕೇಳುದ ಬೇಡಂತ, ಸೊಸೆ ಮಕ್ಕ ಕೊಟ್ಟದರ ತಿಂದ್ಕಂಡ್ ಗೂಬೆ ಕಣ್ಣ್ ಮುಚ್ಚಿ ಕೂರುವಂಗೆ, ಕಣ್ಣ್ ಮುಚ್ಚಿ ಕಂಡ್ ಬಾಯಿ ಮುಚ್ಚಿಕಂಡ್ ಕುದ್ಕಂಡರೆ ಮೊರ್ಯಾದಿ ಉಟ್ಟು. ವಯಸ್ಸಾದವು ಕಿರಿಕಿರಿಂತ ಹೇಳಿರೆ, ಈಗಿನ ಕಾಲಲೀ ಮಕ್ಕ ವೃದ್ಧಾಶ್ರಮಕ್ಕೆ ಸೇರ್ಸುದುಕ್ಕೆ ಹಿಂದೆ ನಿಲ್ಲುದಿಲ್ಲೆ. ಇನ್ನು ಕೆಲವು ಕುಟುಂಬಗಳಲ್ಲಿ ಅಪ್ಪ ಮಕ್ಕಳಲ್ಲಿ ಜಗಳ ಉಂಟಾಗಿ ವ್ಯಾಜ್ಯ ಸಾಜ್ಯ, ಕೋರ್ಟು ಕಚೇರಿ ಮೆಟ್ಟ್‌ಲ್ ಹತ್ತುವವರೆಗೂ ಹೋದೆ. ಆದರೆ ಈ ರೀತಿಯ ವ್ಯವಹಾರ ಆಕೆ ಆಗದ್. ಇದಕ್ಕೆಲ್ಲಾ ಮೂಲ ಕಾರಣ ಪೋಷಕರೇ, ಏಕೆಂತ ಹೇಳಿರೇ, ಪೋಷಕರ್ ಕತ್ತೆ ದುಡ್ದಂಗೆ ದುಡ್ದ್ ಹೊಟ್ಟೆ ಬಾಯಿಕಟ್ಟೆ ಸಂಪಾದನೆ ಮಾಡುದು ಮಕ್ಕಳಿಗಾಗಿ. ಮಕ್ಕಳಿಗೆ ಎಲ್ಲಾ ರೀತಿಯ ಸೌಕರ್ಯಗಳನ್ನ ಮಾಡಿಕೊಡುದ ಪೋಷಕರ ಕರ್ತವ್ಯ. ಮಕ್ಕಳ ಏಳಿಗೆನ ಬಯಸುದು ಪೋಷಕರ ಧರ್ಮ. ಮಕ್ಕಳ ಹಿತವೇ ಪೋಷಕರ ಹಿತ. ಹಿಂಗೆ ಸಂಪಾದನೆ ಮಾಡ್ದ ಆಸ್ತಿ ಪಾಸ್ತಿನ ಮಕ್ಕಳಿಗೆ ಪಾಲು ಪಾರಿಕೆ ಮಾಡಿ ಕೊಡಿಕಾಕನ ಒಂದು ಪಾಲ್ ಪೋಷಕರ ವಶಲ್ಲಿ ಇಟ್ಟುಕೊಣಕು. ಅದರ ಉಸ್ತುವಾರಿನ ಪೋಷಕರೇ ನಡಿಸಿಕಂಡ್ ಅದರಲ್ಲಿ ಬರುವ ಆದಾಯನ ಪೋಷಕರೇ ಉಪಯೋಗಿಸಿಕಂಡ್ ಖುಷಿಂದ ಜೀವನ ಮಾಡೋಕು. ಮಕ್ಕಳ ಸಂಪಾದನೆಗೆ ಕೈ ಒಡ್ಡಿಕಾಗದ್. ಮಕ್ಕಳೇ ಅಪ್ಪ ಅವ್ವಂದರ್‌ಂದ ಕೇಳುವಂಗೆ ಇರೋಕು. ಆಗ ಅಪ್ಪ ಮಕ್ಕಳಲ್ಲಿ ಪ್ರೀತಿ ವಿಶ್ವಾಸ ಬೆಳ್ದದೆ.

ಮನುಷ್ಯ ಜೀವನಲಿ ಎರಡ್ ವಿಧದ ಜೀವನ ಕ್ರಮ ಉಟ್ಟು. ಒಂದು ಸಾಮಾಜಿಕ ಜೀವನ, ಇನ್ನೊಂದು ವಯಕ್ತಿಕ ಜೀವನ. ಸಾಮಾಜಿಕ ಜೀವನಲಿ, ವ್ಯಕ್ತಿ ಸಂಸಾರಸ್ಥನಾಗಿ ಸಂಸಾರದ ಒಟ್ಟಿಗೆ ಪ್ರೀತಿ ವಿಶ್ವಾಸಂದ ಸಮಾಜದ ಎಲ್ಲಾ ಕಟ್ಟು ಪಾಡುಗಳಿಗೆ ಒಗ್ಗಿಕಂಡ್ ಪದ್ಧತಿ ಪರಂಪರೆಗನುಗುಣವಾಗಿ ನಡ್ಕಂಡ್, ಸಮಾಜದ ಎಲ್ಲಾ ಕೆಲಸ ಕಾರ್ಯಗಳಲ್ಲಿ ಭಾಗವಹಿಸಿಕಂಡ್ ಸಂಸಾರದ ಒಟ್ಟಿಗೆ

ಪ್ರೀತಿ ವಿಶ್ವಾಂದ ಬಾಳಿ ಬದುಕುದು.

ವೈಯಕ್ತಿಕ ಜೀವನಲಿ ಆರೋಗ್ಯವೇ ಭಾಗ್ಯಂತ ಹೇಳುವಂಗೆ ತನ್ನ ಆರೋಗ್ಯದ ಕಡೆಗೆ ತುಂಬಾ ಗಮನ ಹರಿಸಿಕ್ಕಾದೆ. ಆರೋಗ್ಯನ ಕಾಪಾಡುದುಕ್ಕೂ ಐದ್ ಸೂತ್ರಗ ಒಳೊ. ಒಂದು ದೈವಭಕ್ತಿ, ಎರಡನೆಯದ್ ಹಿತಮಿತವಾದ ಆಹಾರ ಸೇವನೆ ಮಾಡಿಕಂಡ್ ಮಲಬದ್ಧತೆ ಆಗದಂಗೆ ನೋಡಿಕಂಬದು. ಮೂರನೆದ್ ಹವಾಮಾನಕ್ಕೆ ಸರಿಯಾಗಿ ನೀರ್ ಕುಡಿಯೊಕು. ನಾಲ್ಕನೆದ್ ವ್ಯಾಯಾಮ, ಐದನೆದ್ ಸುಖನಿದ್ರೆ. ಈ ನಿಯಮಗಳನ್ನ ಪಾಲಿಸಿರೆ ಆರೋಗ್ಯಕ್ಕೂ ಒಳ್ಳೆದ್, ಆಯುಷ್ಯವೂ ಹೆಚ್ಚಾದೆ. ಆಧ್ಯಾತ್ಮಿಕ ಭಾವನೆ ಕಡೆಗೆ ಗಮನ ಕೊಟ್ಟರೆ ನಮ್ಮ ಮನ್ಸ್‌ಲೀ ಏಕಾಗ್ರತೆ ಉಂಟಾಗಿ ಮನ್ಸ್ ಚಂಚಲ ಆದುಲ್ಲೆ. ನಾವು ಯೋಚನೆ ಮಾಡಿದ ಕೆಲಸ ಸಫಲ ಆದೆ. ಕೆಟ್ಟ ಭಾವನೆಗೆ ಎಡೆ ಇರ್ದುಲ್ಲೆ.

ವೈಯಕ್ತಿಕ ಜೀವನಲಿ ಸಾಹಿತ್ಯ, ಕಲೆ, ಸಂಸ್ಕೃತಿ, ಸಂಗೀತಗಳ ಕಡೆಗೆ ಗಮನ ಕೊಟ್ಟರೆ ಮನ್ಸ್ ತಿಳಿಯಾದೆ. ಸಮಾಜ ಸೇವೆ ಮಾಡಿಕಂಡ್, ಸಮಾಜ ಮುಖಿಗಳಾಗಿ ಬಾಳುದು. ನಾವು ಸಂಪಾದನೆ ಮಾಡಿ ಉಳಿತಾಯ ಖಾತೆಯಲ್ಲಿರುವ ಸಂಪತ್ತ್‌ನ ದಾನ ಧರ್ಮ ಮಾಡಿಕಂಡ್, ಇಟ್ಟ್ ಹೋಗುವ ಬದ್ಲ್ ಕೊಟ್ಟ್ ಹೋಗುವ ಪ್ರವೃತ್ತಿನ ಬೆಳಸಿಕೊಂಬದು ಒಳ್ಳೆದ್.

ಭಗವದ್ಗೀತೆಲಿ ಹೇಳಿದಂಗೆ ಸಮ ಶತ್ರೇಚ್ಛ, ಮಿತ್ರೇಚ್ಛ ತಡಾ ಮನೋಪೋಮಾನೆಯೋ, ಶೀತೋಷ್ಣ ಸುಖ ದುಃಖೇಸು, ಸಮ ಸಂಘ ವಿವರ್ಜಿತಾ" ಎಂದರೆ ಶತ್ರುಗಳನ್ನ ಮಿತ್ರರನ್ನಾಗಿ ಮಾಡಿಕಂಡ್, ಶೀತ ಉಷ್ಣ, ಕಷ್ಟ ಸುಖಗಳನ್ನು ಸಮಾನಾಗಿ ಸ್ವೀಕರಿಸಿಕಂಡ್ ಬಾಳಿ ಬದುಕುದು ಬಹಳ ಉತ್ತಮ. ಪುಸ್ತಕಗಳನ್ನ, ಪತ್ರಿಕೆಗಳನ್ನ ಓದುದರಿಂದ ವಿಷಯ ಜ್ಞಾನ ಹೆಚ್ಚಾದೆ. ಮನುಷ್ಯಂಗೆ ಅನುಭವ ಜ್ಞಾನ ಬಹುಮುಖ್ಯ. ಅನುಭವವೇ ವಿದ್ಯೆ. ವಿದ್ಯೆಗೆ ವಯಸ್ಸಿಲ್ಲೆ. "ನಹಿ ಜ್ಞಾನೇನ ಸದೃಶಂ" ಎಂದರೆ ಜ್ಞಾನಕ್ಕೆ ಮಿಗಿಲಾದ್ ಬ್ಯಾರೇ ಯಾವುದೂ ಇಲ್ಲೆ. ಇದುವೇ ಮನುಷ್ಯ ಜೀವನದ ಬಹು ಮುಖಗಳ ಮಾರ್ಗ ಸೂಚಿ.

✍ಕೆ. ಕೆ. ಬೆಳ್ಳಿಯಪ್ಪ

ಸ್ಥಿತಿಗತಿ

# ಗ್ಯಾನಾದೆ–ಆಲ್‌ಸಿ

ಹುಲಿಗ ದನಗಳ್‌ನ ಹಿಡಿಯೋದು – ಆನೆಗಳ ಕಾಟಂದ
ಫಸ್‌ಲ್ ನಷ್ಟ – ಕಾಡ್ ಹಂದಿಗ – ಕಾಟಿಗ ರಾಜ್ಯ ಹೆದ್ದಾರಿಲಿ
ಗುಂಪುಕಟ್ಟಿ ಬಾದು – ಹೆಬ್ಬಾವು – ಕಾಳಿಂಗ ಸರ್ಪಗ ಪ್ಯಾಟೆಗೆ
ಬಾದು –ಕಪಿಗಳ ಕಾಟ ಇದೆಲ್ಲಾ ನಿತ್ಯ ಪೇಪರ್ ಸುದ್ದಿ !

ಆದರೆ ಈ ವರ್ಷದ ಸಮಸ್ಯೆನೆ ಬ್ಯಾರೆ! ಇಂತ ಮಳೆ ಬಂದದ್ ಯಾಗಾರ್ ಕಂಡೊಳರಿಯಾ? ಅಯ್ಯೋ ಮಳೆ ತೇಳ್‌ಕನ ಗ್ಯಾನಾದೆ – ಅದ್ ಪ್ರತಿವರ್ಷ ಮಳೆ ಕಮ್ಮಿ ಆಗ್‌ವ ಸಮೆಯ ಆಗಸ್ಟ್ ಸುರುನ ವಾರ ಒಂದು ದಿನ ನಟ್ಟ ನಡು ಮಧ್ಯಾಹ್ನ ಗ್‌ಡ್ ಗ್‌ಡ್ ಭೂಮಿ ನಡ್‌ಗುವ ಸದ್ದ್ ಕೇಳ್ತ್. ಪಾತ್ರಗ ಅಲ್ಲಾಡ್ತ್, ಕುರ್ಚಿಗ ಅಲ್ಲಾಡ್ದೊ ಫೋನ್ ಮ್ಯಾಲೆ ಫೋನ್ ಬಾತ್. ಅಂದ್ ಪ್ಯಾಟೆಗೆ ಹೋಗಿದ್ದ ನಂಗೆ ವಾಹನಗಳ ಸದ್ದ್‌ಲಿ ಗೊತ್ತೇ ಆತ್‌ಲೆ!

ಗ್ರಹಣ ಬಾಕನ ಭೂಮಿ ನಡ್‌ಗಿದೆತ ಹಿಂದೆನವು ಹೇಳ್ತಿದ್ದೊ. ಈ ಸದ್ದ್‌ನ ಎಷ್ಟೋ ಸಲ ಕೇಳ್ಯೊಲೊ ಕೂಡಾ. ಈ ವರ್ಷ ನೋಡಿ ಕೆಂಪು ಚಂದ್ರಗ್ರಹಣ ಆತಲಾ? ಜನ ಗ್ರಾಚಾರ ಸೆರಿಯಿಲ್ಲೆತೇಳಿ ಅವರವರ ರಾಶಿಗೆ ದೋಷವುಟ್ಟುತೇಳಿ ದೇಸ್ಥಾನಕ್ಕೆ ಹೋಗಿ ಪೂಜೆ ಮಾಡ್ಸಿದ್ದೇ ಮಾಡ್ಸಿದ್ ದೊಡ್ಡ ವಿಷಯ ಆಗಿತ್ತ್. ಅರ್ಚಕರ್ ಹೇಳ್ದೊ – ಏನೂ ತೊಂದರೆ ಆದುಲೆ ಅದ್ ಅಮೇರಿಕಲಿ ಸಮುದ್ರದೊಳಗೆ ಏನಾರ್ ಸಂಭವಿಸಿದೆತ. ಅಂದೇ ಇರ್‌ಳನ ಬೆಳಗಾಕೆ ಮುಂದೆ ಜಲಪ್ರಳಯ ಆಗೇ ಹೋತು.

ಅಷ್ಟೊತ್ತಿಗೆ ಮಳೆನೂ ಬುಡ್‌ದೇಲೆ. ಏನ್ ನೀರ್ ರಸ್ತೆಲಿ ಹೊಳೆಲಿ ಲೇಔಟ್‌ಗಳ್‌ಲಿ ಜನ ಅಲ್ಲಲ್ಲೆ ನಿಲ್ಲಿಕಾತ್ ಯಾರೋ ಫೋನ್ ಮಾಡ್ದೊ ಮಡಿಕೇರಿ ಕ್ವಾಟೆಲಿ ಒಂದು ಅಡಿ ನೀರ್ ನಿತ್ತುಟುಗಡ. ಈ ವರ್ಷ ಸ್ವಾತಂತ್ರ್ಯ ದಿನಾಚರಣೆ ಮಾಡಿಕಾದುಲೆ ಗಡತ. ಅಂತೂ ಒಂದು ಬರಿಲಿ ಬಾವ್‌ಟ ಹಾರ್‍ಸಿದೊತ ಗೊತ್ತಾತ್.

ಇನ್ನೂ ಮುಗ್ತ್‌ಲೆ ಕೇಳಿ – ಮಳೆತೇಳ್‌ಕನ ಅದ್‌ಕೆ ಹೊಸ ಹೊಸ ಹೆಸ್‌ರ್‌ಗ ಹುಟ್ಟಿದೊ – ಮಳೆ – ಮಹಾಮಳೆ ರಣ ಮಳೆ ಮಾರಿಮಳೆತ ನಾಕಾರ್ ಹೆಸ್‌ರ್ ಪಡ್ಕಂಡ್ ಮಳೆನ ಪ್ರಭಾವನ ಮಾಧ್ಯಮದವು ಮಾಲೆ ಪಿಟಾಕಿನಂಗೆ ಪ್ಲೋಣ್‌ಸಿ ವರದಿ ಮಾಡ್ದೊ. ಈ ವರ್ಷ ಚಂದ್ರಗ್ರಹಣದ ಪ್ರಭಾವ ಜಲಪ್ರಳಯ

ಆದೆತ ಜ್ಯೋತಿಷ್ಯರ್ ಹೇಳಿದ್ದೊಗಡ. ಮಾಧ್ಯಮದ ವರದಿ ಜಲಪ್ರಳಯ ಭೂಕಂಪತೇಳಿ ದೃಶ್ಯ ಮಾಧ್ಯಮಲಿ ನೋಡಿ ಜನ ಹೆದ್‌ರಿ ನಡ್‌ಗಿದೊ.

ಕೊಡ್ಗಿಗೆ ಮಳೆ ನೋಡಿಕೆತೇಳಿ ಪ್ರವಾಸಿಗರ ಸಂಖ್ಯೆ ದಿನಂದ ದಿನಕ್ಕೆ ಏರ್ತಾಯಿತ್ತ್. ಪ್ಯಾಟೆಲಿ ವಾಹನಗಳ ದೆಸೆಂದ ಕಾಲ್ ಹಾಕಿಕೆ ಜಾಗಯಿಲ್ಲೆ. ಆಗಸ್ಟ್ ಹತ್ತಕೆ ಮುಟ್ಟ ಮಳೆ ಸೆರಿಯಾಗಿತ್ತ್. ಒಟ್ಟಿಗೆ ಅಮವಾಸ್ಯೆನ ಕರಿಕತ್ತಲೆ ಸಂಕ್ರಮಣದ ಜಡಿಮಳೆ ಸೂರ್ಯಗ್ರಹಣ ಬಿರುಗಾಳಿನ ರಭಸ ಮರಗಳ್‌ಲಿ ಸೊಪ್ಪಿಲ್ಲದಂಗಾತ್. ಕಾಫಿ ವಳ್ಳೆ ಮೆಣ್ಸ್ ಗುಡ್ಡೆ ಗಡ್ಡೆ ಉದ್‌ರಿ ಬೀತ್. ಹಿಂಗೆ 15ನೇ ತಾರೀಖ್‌ನ ಮಧ್ಯಾಹ್ನ ಮ್ಯಾಲೆ ಬರೆಗ ಜರಿಯಕೆ ಸುರಾದೊ. ಅಷ್ಟೊತ್ತಿಗೆ ಜನರ್‌ನ ಪೋಲಿಸನವು ಮನೆ ಖಾಲಿ ಮಾಡ್‌ಸ್ತಾಯಿದ್ದೊಗಡ. ಸೂರ್ಯಗ್ರಹಣನೂ ಬಾತಲಾ? ಅದೇ ಸಮಯಲಿ ರಾತಾರಾತ್ರೆ ಭೂ ಕುಸಿತ ಸುರಾತ್. ಮಣ್ಣೊಳಗೆ ಮನೆಗ ಹೋಗಿ ಜನ ಪ್ರಾಣಿಗ ತೀರಾ ಮಣ್ಣಡಿಗೆ ಆದೊ. ಹಂಗಾಗಿ ಹಿರಿಯೊವು ಹೇಳ್ತಾಯಿದ್ದ ಭೂಕಂಪ ನಮ್ಮ ಕಣ್ಮುಂದೆ ನೋಡುವ ಹಂಗಾತ್. ಭೂಮಿಗೆ ಕೆಲು ನಕ್ಷತ್ರದ ಮಳೆಗ ಭಾಷೆ ಕೊಟ್ಟೊಳೊತ ಹೇಳ್ದು ರೂಡಿಮಾತ್. ಅಂತ ನಕ್ಷತ್ರದ ಮಳೆಗ ಹೆಂಗೆ ಏನ್‌ತೇಳಿ ಹಾಡ್‌ನ ಮೂಲಕ ಕೇಳೊನ

ಇಗ್ಗುತಪ್ಪದೇವನೆ ಈಶ್ವರನೆ
ಪಾಡಿಲಿ ನೆಲೆ ನಿತ್ತ ಮಳೇಶ್ವರನೆ।
    ಮಳೆ ದೇವ್‌ರು ತೇಳ್‌ವ ಹೆಸರ್ ನಿಂಗೆ
    ಮಳೆ ಬರದಿದ್ದರೆ ಫಲಯೆಲ್ಲಿ ನಾವ್‌ಗೆ?॥
ಭರಣಿ ಮಳೆ ಬಂದ್ ಭೂಮಿ ತಂಪಾಗಿ
ತಂಪಾದ ಭೂಮಿಲಿ ಮರಗಿಡ ಹಸ್‌ರಾತ್ ॥
    ಕಾರ್ತಿಂಗ ಹಿಡ್ದ್ ಆರಿದ್ರ ಮಳೆಬಂದ್
    ಭೂಮಿನ ಹೂಡಿ ಗೊಬ್ಬರ ಸೊರ್ದ್..... ಓ ಇಗ್ಗುತ್ತಪ್ಪಾ॥
ಆಟಿ ತಿಂಗಳ್‌ಲಿ ಕರಿಮೋಡ ಕವ್‌ದ್
ಪುನಃ ಪುನಃ ಪುನರ್ವಸು ಪುಷ್ಯಾ....
    ಜಡಿಮಳೆ ಬಂದರೆ ಓ.... ಇಗ್ಗುತಪ್ಪಾ
    ನಂಬಿಕಾದುಲೆ ಆಶ್ಲೇಷಾ ಮಳೆನಾ!!....॥

ನಿಜ, ಅದೂ ಯಾವ ನಕ್ಷತ್ರದ ಮಳೆಗ ಎಷ್ಟ್ ದಿನ ಬಂದದೆತೇಳಿ ರೈತರ್ ಲಾಯ್ಕಾಗಿ ತಿಳ್‌ಕಂಡಿದ್ದೊ. ಯಾಗ ಗೊತ್ತಾ? ಮರದ ನೇಗ್‌ಲಿಲಿ ಹೂಡುವ

ಆ ದಿನಗಳ್‌ಲಿ.

ಹಿಂಗೆ ಆಗಸ್ಟ್ ಹದ್‌ನಾರನೆ ಹೊತಾರೆ ನೋಡ್ರೆ ಇರಿಕೆ ಮನೆ ಇಲ್ಲೆ. ಬೆಳ್‌ಸಿದ ಕಾಫಿ ತ್ವಾಟ ಕಾಂಬೊದೆಯಿಲ್ಲೆ – ಎತ್ತ ಹೋಕು ದಾರಿಯಿಲ್ಲೆ. ಬೆಟ್ಟಗ ಜಾರಿಬಂದ್ ಮದೆನಾಡ್ ಜೋಡುಪಾಲಕೆ ಮುಟ್ಟ ಸಂಪರ್ಕಯಿಲ್ಲೆ. ಮಡಿಕೇರಿಗೆ ಬರ್‌ವ ನಾಕ್ ದಿಕ್ಕ್‌ನ ಮಾರ್ಗಗ ಭೂ ಕುಸಿತಂದ ದಾರಿಯಿಲ್ಲದೆ ಸಂಪರ್ಕ ಕಡ್‌ದೇ ಹೋತು. ಪ್ಯಾಟೆಲಿ ಜನಯಿಲ್ಲೆ. ಪ್ರವಾಸಿಗರ್‌ನ ಕಡ್ಡಾಯವಾಗಿ ಬರ್‌ಬಡಿ ಕೊಡ್ಗ್ ಕೊಚ್ಚಿಹೋಗುಟು. ಹಿಂಗೆ ಮಾಧ್ಯಮ ವರದಿ ಸುದ್ದಿ ಕೇಳಿ ಹೆದ್‌ರಿ ವಾಪಾಸ್ ನಡ್ದೊ. ಅಂದ್ ಹೋದವು ಇಂದ್ ಮುಟ್ಟ ಬಾಕೆ ಹೆದ್‌ರ್‌ವೆ. ಬೆಟ್ಟಗ ಜಾರಿಬಾಕನ ಬೆಟ್ಟ ಕೊಡಿಂದ ಜಲ ಹೊರ್‌ಟ್‌ತೇಳ್ರೆ ಜಲಸ್ಫೋಟ ಆಗಿ ಜಾರ್‌ಕನ ಸುಳಿನಂಗೆ ಸುತ್ತಿಕಂಡ್ ಮರಗ ಬೇರ್ ಸಮೇತ ಅಡಿ ಮೇಲಾಗಿ ಎತ್ತತ್ತೊ ರಟ್ಟಿ ಬಾತ್. ಬಂಡೆಗ ಉರುಳಿ ಬಾತ್. ಒಟ್ಟಿಗೆ ಎಲ್ಲಾ ನೆಲಸಮಾ ಆತ್.

ಇನ್ನೊಂದು ಮನ್ಸ್ ಕರ್‌ಗುವ ವಿಷಯ ಎಂತದ್‌ತೇಳ್ರೆ ಅವ್ವ ಮಕ್ಕ ಕೈ ಕೈ ಹಿಡ್ಕಂಡ್ ಓಡ್‌ಕನ ಸಾವುಲಿ ಒಂದಾಗಿ ಮಣ್ಣಾದ್. ಹಿಂಗೆ ಕೆಲು ಕಡೆ ಆತ್. ಅವರ ಗ್ಯಾನಕ್ಕಾಗಿ ಒಂದು ಜನಪದ ಗೀತೆ ಕೇಳೊನ – ಇದೆಲ್ಲಾ ನಮ್ಮ ಮನ್ಸ್‌ನ ಪ್ರಾರ್ಥನೆ.

ಅವ್ವಾ ಮಕ್ಕಳ ಬೆಸುಗೆ । ಅಂಗ್ಯೆ ತೀಟಿದ ಹಂಗೆ
ಜೋಡಿ ಕಿನ್ನೂರಿ ನುಡಿಸಿದಹಂಗೆ ॥ ಶಿವನೆ
ತಾಳ ತಂಬೂರಿ ಬಾರಿಸಿದಂಗೆ ॥

ಬ್ಯಾಸಿಗೆ ದಿನ ಬೇವುನ ಮರ ತಂಪು
ಕಾವೇರಿ ಹೊಳೆ ನೀರ್ ಬಲು ತಂಪು ॥ ಶಿವನೆ
ರುಚಿಯಾದ ಎಳೆ ಸೌತೆ ಕಾಯಿ ॥

ಹುಣ್ಣಿಮೆ ಚಂದಿರನ ತಂಪಾದ ಬೆಳ್‌ಕ್
ದಾನ ಧರ್ಮಕಿಂತ ಮೇಲ್ ॥ ಶಿವನೆ
ಅವ್ವಾ ನೀಡ್‌ದ ಎದೆಹಾಲ್ ॥

ಹಿಂಗೆ ಕೊಡ್ಗ್‌ನ ಜಲಪ್ರಳಯಂದ ಹೆದ್‌ರಿ ಇನ್ನ್ ಇಲ್ಲಿ ಬದ್‌ಕಿಕೆ ಆದುಲೆತ ಕೆಲ ಜನ ಹೊರಗೆ ದಾಟ್ತಾವಳೊ. ಮತ್ತೆ ಕೆಲವು ಇಲ್ಲೆ ಇದ್ದ್ ಬದ್‌ಕಿ ತೋರ್‍ಸುವೆತೇಳ್ತಾವಳೊ. ಇಲ್ಲಿನ ಹದಿಮೂರು ಗ್ರಾಮಗ ನೆಲಸಮ ಆಶ್‌ತೇಳ್ದು ಸಾಮಾನ್ಯ ವಿಸಯವಲ್ಲ. ಎಷ್ಟೊ ಜೆನಕೆ ಮನೆಯಿದ್ದರೂ ವಾಸ ಮಾಡಿಕಾಗದೆ ಸರ್ಕಾರ ಸಾಂತ್ವನ ಹೇಳಿರೂ ಊರುಬುಟ್ಟ್ ಹೋಗ್ತಾಯಿರುವವುಕಾಗಿ ಒಂದೆರಡು ಕವನದ ಸಾಲ್‌ಗ ಹಿಂಗುಟ್ಟು :-

ನೆಲಲಿ ಫಲಯಿಲ್ಲೆತೇಳಿ ಊರು ಬುಟ್ಟ್ ಹೋಗ್‌ಬಡಿ<br>
ಹಚ್ಚೊನ ಹೊಸ ದೀಪನಾ.....ಯಿಲ್ಲಿ ಭೇದಭಾವ ಬ್ಯಾಡ ನಮ್ಮಲಿ.<br>
ನಾಡ್ ಕಟ್ಟೊನ ಯುವ ಶಿಲ್ಪಿಗಳೆ ಹೊಸ ಇತಿಹಾಸ ಪುಟಲಿ<br>
ಧರ್ಮ ಸಮಾಜ ಸಂಸ್ಕೃತಿ ತೇಳಿ ಕೂಡಿ ಸಾಗೊನ ಒಂದಾಗಿ.

ವಿಜ್ಞಾನ ಗೆದ್ದ್ ಬಂದ್ ಅಜ್ಞಾನ ಮೆಟ್ಟಿ ನಿತ್ತ್<br>
ಹೊಸ ಕೊಡಗ್‌ನ ನಿರ್ಮಾಣಯಿಲ್ಲಿ ಓ ಯುವಕರೆ ॥<br>
ಮಹಾತ್ಮರ ಚೈತನ್ಯದ ಈ ಪುಣ್ಯಭೂಮಿಲಿ<br>
ಹಚ್ಚೊನ ಹೊಸದೀಪನಾ.... ನಾವು ಕೂಡಿ ಹಚ್ಚೊನಾ.....॥

ಮಾಮೂಲು ವರ್ಷಕ್ಕೆ ಬರುವ ಮಳೆ 120 ಇಂಚ್ ಸ್ವಲ್ಪ ಹೆಚ್ಚಾಗಿದ್ದರೆ 130 ಇಂಚ್. ಈ ವರ್ಷ ಮಡಿಕೇರಿಗೆ 240 ಇಂಚ್ ದಾಖಲಾಗುಟ್ಟು. ಹಂಗೆ ಹಾನಿಗೊಳಗಾದ ಊರುಗಳ್‌ಲಿ ನಾನೂರು ಇಂಚ್ ದಾಟಿಟುತೇಳ್ವೆ, ಹಂಗಾಗಿ ಈ ಸಲ ಚಂದ್ರಗ್ರಹಣದ ಪ್ರಬಾವಂದ ವಿಪರೀತ ಮಳೆ ಬಂದುಟು.

ಹಿಂದೆಲ್ಲಾ ಕೊಡ್ಗ್‌ಲಿ ಕೆರೆ ಕಾಂಬಕೆ ಸಿಕ್ತಿತ್ತಾ? ಈಗ ನೋಡಿ ತಟ್ಟ್ ಜಾಗಂದ ಹಿಡ್ದ್ ಬೆಟ್ಟ ಕೂಡಿಗೆ ಮುಟ್ಟ ಏಕ್ರೆಗಿಂತ ಅಗಲ ಜ್ಯಾಸ್ತಿನ ಕೆರೆಗಲ್ಲಿ ನೀರ್ ತುಂಬಿದ್ದದೆ. ಅದರ್‍ನ ಮಳೆ ಬಾಕನ ಖಾಲಿ ಮಾಡಕಲಾ? ಇನ್ನ್ ತುಂಬಿದ ನೀರ್‌ಂದ ಕೆರೆ ವಡಿಯದೆ ಇರಿಕೆ ಸಾಧ್ಯವುಟ್ಟಾ? ಹೋ ಅದರ್ಲಿ ಮೀನ್‌ಗ ಬ್ಯಾರೆವುಟ್ಟು?

ಜನಕೆ ಪ್ರತಿಯೊಬ್ಬಂಗೆ ಮನೆ ಬೇಕು ನಿಜ. ಆದರೆ ಬೆಟ್ಟದ ಕೊಡಿಲಿ ಬರೆ ಜಾರುವಲ್ಲಿ ಮನೆ ಕಟ್ಟುವೆ. ಅದರ ನೀರ್ ಹೋಕಲಾ? ಕಟ್ಟ್‌ಬಡಿ ತೇಳ್ರೆ ಕೇಳ್ದುಲೆ.

ಇಂದ್ ಜೆ.ಸಿ.ಬಿ. ಗ ಇಲ್ಲದ ಜಾಗನೇ ಇಲ್ಲ. ಬೆಟ್ಟ ಕೊರ್ದ್ ದಾರಿ ಮಾಡ್ದು, ಬಂಡೆಕಲ್ಲ್‌ಗಳ್‌ನ ಉರುಳುಸುದು, ಬೆಟ್ಟ ಕೊಡಿಲಿ ಗಣಿಗಾರಿಕೆ, ಬೆಟ್ಟದ ಕೊಡಿಲಿ

ಕಾಂಕ್ರಿಟ್ ರಸ್ತೆಗ ಅದಕ್ಕಿಂತ ಕೊಡಿಲಿ ಪೈಸಾರಿ ಮನೆಗ. ಅದ್ಕೆ ಎತ್ತರಲಿ ಹೋಂ ಸ್ಟೇಗ. ಅದೂ ಸಣ್ಣ ಕಟ್ಟಡಗ ಅಲ್ಲ. ಒಮ್ಮೆ ಹೋಗಿ ನೋಡ್ರೆ ಗೊತ್ತಾದೆ!!

ಇನ್ನ್ ರಾಜಾರೋಡ್‌ಲಿ ಚರಂಡಿ ವ್ಯವಸ್ಥೆನೆಯಿಲ್ಲೆ. ನೀರ್ ದಾರಿಲೆ ಹೋದು. ಮಳೆಗಾಲಕೆ ಮುಂದೆ ಒಮ್ಮೆ ಮತ್ತೆ ಮಳೆಗಾಲ ಕಳ್‌ದಮ್ಯಾಲೆ ಹಿಂಗೆ ವರ್ಷಕ್ಕೆ ಎರಡ್ ಸಲ ದಾರಿಗಳ ಬದಿ ರಿಪೇರಿ ಮಾಡಿಕಣಿಕೆ ಹೇಳೊಕಾ? ಅದೂ ಮಾಡ್ದ ಕೆಲ್ಸನೂ ಕಳ್‌ಪೆ. ಒಂದೇ ಮಳೆಗೆ ಸಿಮೆಂಟ್ ಹೋಗಿ ನೆಲ ಒಡ್ದ್ ಆಗಿದ್ದದೆ.

ಇನ್ನ್ ಹಳ್ಳಿಗಳ್‌ನ ನೋಡ್ನೊ. ಕಾಪಿ ತ್ವಾಟದ ಆಚೆ ಈಚೆ ಕಾಡ್ ಕಡ್ದ್ ನೀರ್ ಸೇರಿಹೋಕೆ ದಾರಿ ಮಾಡಿಕಣಿಕೆ ಆದೆಲ್ಯಾ? ಬೇಲಿ ಕಡ್ದ್ ದಾರಿಗೆ ಹಾಕುದು. ಆ ರಾಶಿ ಮ್ಯಾಲನೆ ವಾಹನಗ ಹೋದವೆ. ದಾರಿಲ್ಯೊ ಕೆಸ್‌ರ್ ಗುಂಡಿಗ! ಎಲ್ಲಿ ಹೋದರೂ ಅಂವ ಮಾಡ್ಲಿ, ಅದ್ ಮಂಡಳದವು ಮಾಡ್ಲಿ, ಸರ್ಕಾರ ಮಾಡ್ಲಿತ ದೂಷಣೆ ಮಾಡ್ದುಬುಟ್ಟ್ ಇದರ್ನೆಲ್ಲಾ ಊರ್‌ನ ಯುವಕರ ಶ್ರಮದಾನ ಮೂಲಕ ಸರಿಮಾಡ್ರೆ ಎಸ್ಟ್ ಲಾಯ್ಕ? ಹಿಂಗೆ ಕೆಲ್ಸ ಮಾಡ್ದ ಸಂಘಗಳಿಗೆ ಸರ್ಕಾರಂದ ಬಹುಮಾನ ಪ್ರಶಸ್ತಿಗ ಸನ ಬಂದವೆ. ಮನ್‌ಸ ಪಾಲಿಗೆ ಹರಿವೆ ಬಿತ್ತಿಕಾಗದ್. ಊರ್‌ಲಿ ಒಗ್ಗಟ್ಟ್ ಇಟ್ಟ್‌ಕಂಡ್ ಶ್ರಮ ವಹಿಸೊಕು. ವಾಹನ ಇದ್ದರೆ ಸಾಲ್ದ್ ಅದ್ ಬರುವ ದಾರಿ ಸ ಸೆರಿಯಿರೊಕಲಾತೇಳ್ತಾ

ಈಗ ಇಷ್ಟೊಂದ್ ನಾನೆ ಹೇಳ್ಕಂಡೆ ಅಲ್ಲಾ, ನಿಮಗು ಗೊತ್ತಾಗಲಿ ತೇಳಿ ಬರ್ದೆ. ಇಷ್ಟೆಲ್ಲಾ ಆಕನ ಅಂದ್ ಜೀವಯಿದ್ದಂಗೆ ಹೋದವರ ಆತ್ಮದ ಶಾಂತಿಗಾಗಿ ಒಂದು ಮೌನ ಪ್ರಾತನೆ.

ಕಾಯಕನೆ ಕೈಲಾಸಂತೇಳಿ ಗ್ಯೆದೆ ನಾನ್ ಅನುದಿನಾ....
ನಿನ ಶ್ರಮ ಎಲ್ಲಿ ಸೋರಿಹೋ....ತು ಓ ಆತ್ಮ?....॥
    ಸೃಷ್ಟಿಲಿ ಬದ್‌ಕಿದೆ ಮನ್‌ಸನಾಗಿ, ಕಷ್ಟಸುಕಲಿ ಬಾಗಿಯಾಗಿ
    ನಿಲ್ಲದಾದೆ ಈ ಲೋಕಲಿ ಓ ಆತ್ಮವೆ......॥
ಹೆಜ್ಜೆ ಹಿಂದೆ ನಿಲ್ಸದೆ ಮುಂದೆ ಸಾಗಿ ಹೋದಾತ್ಮಾ....
ನಿನ್ನಾತ್ಮ ಎಲ್ಲಿ ದಾಟಿ ಹೋತು? ಓ ಆತ್ಮವೇ....॥
    ಪುನರ್ಜನ್ಮ ತೇಳ್ದು ಎಲ್ಲುಟ್ಟು ತಿಳ್‌ದು... ಇನ್ನೆಲ್ಲಿ ನಿನ್ನ ಕಾಯಕಾ
    ನಿಂಗಾಗಿ ಕಣ್ಣೀರ್ ಹರ್‌ದೋತು। ನಿನ್ನ ಶ್ರಮ ಎಲ್ಲಿ ಸೋರಿಹೋತು
ಈ ಲೋಕದ ರುಣಕೆ ಕೈ ಮುಗ್ದ್ ಸಾಗಿದಾತ್ಮ
ಅಂಗಳದ ತೊಳಸಿಯಾಗಿ ನೆಲ್ಲಕ್ಕಿ ದೀಪದ ಬೆಳ್‌ಕಾಗಿ
ಗುರುಕಾರ್ಣರ ಕೂಡಿ ಹರ್‌ಸ್ ನಂಬಿದವರ್‌ನಾ.... ಓ ಆತ್ಮಾ... ಓ॥ ಆ...ತ್ಮಾ॥

ಮೂರು ತಿಂಗ ಕಾಣದ ಸೂರ್ಯಂಗಾಗಿ ಬೇಡ್ಯೊ. ಸರ್ಕಾರ ಮಿಲಿಟರಿ ಪಡೆಗಳ್‌ನ ಕರ್‌ಸಿತ್. ಒಟ್ಟಿಗೆ ಇಲ್ಲಿನ ಯುವ ಸಂಘಗ ರಾತ್ರಿ ಹಗಲ್ ಕೆಲ್‌ಸ ಮಾಡ್ಯೊ. ರಾತ್ರೆ ಬೆಳ್‌ಕಿಲ್ಲೆ, ಫೋನ್‌ಯಿಲ್ಲೆ, ಕರೆಂಟ್‌ಯಿಲ್ಲದೆ ಜನರ ರಕ್ಷಣೆ ಮಾಡಿಕೆತೇಳಿ ಮಿಲಿಟರಿಯವುಕೆ ಉಂಬುಳು ಕಾಟನೂಯಿತ್ತ್. ಅವು ಗೊತ್ತಿಲ್ಲದ ಊರ್‌ಲಿ ಜನರ್‌ನ ರಕ್ಷಿಸಿಕೆ ಎಳ್‌ದೆಳ್‌ದ್ ತಂದೊ. ಆಗ ಕೆಲವರ ತಲೆ ಕಾಲ್‌ಗಳಿಗೆ ಮರದ ಗೆಲ್ಲ್‌ನ ಬಡ್ದ್ ಸಂತ್ರಸ್ಥ ಕೇಂದ್ರಲಿ ಪಟ್ಟಿಕಟ್ಟಿ ಕಂಡಿದ್ಯೊ. ಎಷ್ಟೋ ಜನರ ಕತೆ ಏನೇನೊ ಆತ್. ಒಂದು ರಾತ್ರೆಲಿ ಜಲಪ್ರಳಯ ಆಗಿ ಶ್ರೀಮಂತರ್ ಬಡವು ಆದೊ.

ಸುದ್ದಿ ಕೇಳಿ ಹೊರ ಊರುಗಳಿಂದ ಲಕ್ಷಗಟ್ಲೆ ಸಾಮಾನ್ ಅಕ್ಕಿ ದುಡ್ಡು ಬಾತ್. ಬರ್‌ತಾನೆವುಟ್ಟು ಜನಕೆ ಯಾಗ ಹೆಂಗೆ ಕಷ್ಟ ಬಂದದೆತ ಹೇಳಿಕಾದುಲೆ. ಎಲ್ಲದರ್‌ನ ಎದ್‌ರ್‌ಸುವ ಶಕ್ತಿ ಬೇಕುತೇಳಿ ದೇವ್ರುನ ಬೇಡೊನ.

ನಂಗೆ ಯಾರೋ ಒಬ್ಬ ರಿಕ್ಷಲಿ ಹೋಕನ ಹೇಳ್ದ ಮಾತ್. ಹಿಂದೆ ಕಾಲಜ್ಞಾನ ಪುಸ್ತಕಲಿ ಈಗ ಹಾನಿ ಆದ ಜಾಗಲಿ ಒಂದು ಉದ್ದದ ಗೆರೆ ಎಳ್ಕಂಡುಟ್ಟುತ ಹಿರಿಯೊವು ಹೇಳ್ದ ಮಾತ್‌ಗಡ. ಅದೂ ಯಾಕೆ ನಿಜ ಆಗಿರಿಕಾಗದ್? ಎಲ್ಲ ಪ್ರಕೃತಿ ನಿಯಮದಂಗೆ ನಡ್‌ದುಟ್ಟು. ಯುಗಗಳಿಗೊಮ್ಮೆ ಇಂತದೆಲ್ಲ ನಡ್‌ದದೆ. ಈ ಪ್ರಪಂಚಲಿ ದಿನನಿತ್ಯ ಎಂತೆಂತೆದೆಲ್ಲಾ ಆದುಲೆ? ನಾವು ತಲೆ ಕೆಡ್‌ಸಿಕೊಂಡಳಾ? ಈಗ ನಮಿಗೆ ಕಷ್ಟ ಬಾಕನ ಗೊತ್ತಾತ್. ಪ್ರವಾಸೋದ್ಯಮನ ನಂಬಿಕಂಡ್ ಜನ ಕಷ್ಟಲಿವಳೊ ವ್ಯಾಪಾರಯಿಲ್ಲೆ – ಕಾಪಿ, ಮೆಣ್ಸ್‌ಯಿಲ್ಲೆ ಇರುವ ಜನಕೂ ಕೆಲ್ಸಯಿಲ್ಲೆ. ಏನೊ ಮೂರು ತಿಂಗಳ್‌ಂದ ಈ ಮಳೆದೇ ಮಾತ್ ಬೇರೆ ಏನೂ ಕೆಲ್ಸಯಿಲ್ಲೆ.

✍ಬೈತಡ್ಕ ಜಾನಕಿ ಬೆಳ್ಯಪ್ಪ

# ರೈತರ ಬಂಜ

ಹಳ್ಳಿಯ ರೈತರ ಕೆಲಸ ಮಾರ್ಚ್ ಏಪ್ರೆಲ್ ತಿಂಗಳಲ್ಲಿ ಮಳೆಗಾಲಕೆ ಇರುವ ಸೌದೆ, ತೋಟಗಳಿಂದ ಕಡ್ದ್ ರಡಿ ಮಾಡಿದ್ದವೆ. ಮೇ ತಿಂಗಳಂದ ಮಳೆ ಸುರಾದೆ. ಬಿಸು ಸಂಕ್ರಮಣಲ್ಲಿ ಬೀಜ ಹಾಕುವ ಯಕಲ್ ಗದ್ದೆಗೆ ಹೂಡಿಕೆ ಎತ್ತ್ ಕಟ್ಟ್‌ಕನ ಎತ್ತ್‌ಗಳಿಗೆ, ನೊಗಕೆ ಗಂಧದ ಬೊಟ್ಟು ಹಾಕಿ ಶಾಸ್ತ್ರಕೆ ಹೂಡುವೆ. ಮಳೆ ಬಂದ್ ಗದ್ದೆ ಹದ ಇದ್ದರೆ, ಯಾಗೋಳು ಹೂಡುವೆ. ಎಲ್ಲಾ ಗದ್ದೆ ಹಡಿಲ್ ತೆಗೆದ್ ಆತ್. ಇನ್ನ್ ಗೊಬ್ಬರ ಹೊತ್ತ್ ಗದ್ದೆಗಳಿಗೆ ಹಾಕುವ ಕೆಲಸ. ಮುಂಗಾರ್ ಮಳೆ ಸುರಾಕನ ಎಕಲ್ ಗದ್ದೆನ ನೀರ್‌ಗೆ ಹೂಡಿ ಏರಿಕಡ್ದ್ ರಡಿ ಮಾಡಕು. ಯಕಲ್ ಗದ್ದೆಗೆ ಬೀಜ ಹಾಕಿ ಒಂದು ತಿಂಗಳಿಗೆ ಅಗೆ ಬಾಕನ ಬಾಕಿ ಗದ್ದೆಗಳನ್ನೆಲ್ಲಾ ಮೂರು ಸಾಲ್ ಹೂಡಿ ಏರಿ ಕಡ್ದ್ ಎಲ್ಲಾ ಕೆಲಸ ರೆಡಿಯಾಗಿ ಇರಕು. ಒಳ್ಳೆಯ ದಿನ ನೋಡಿ ಅಗೆ ಮೂರ್ತ ಮಾಡಕು. ಅಗೆ ಮುರ್ತ ಮಾಡಿಕೆ ಐದು ವಿಳ್ಯದ ಎಲೆ, ಐದು ಹೋಳಡಿಕೆ ಬೇಕು. ಅಗೆ ವಡಿಗ ಒಂಬತ್ತು ಹನ್ನೊಂದುತೇಳಿ ಇದ್ದದ್ದೆ. ಹನ್ನೊಂದರ ಮಧ್ಯದ ವಡಿಗೆ ಐದ್ ಎಲೆ, ಐದ್ ಅಡಿಕೆ ಎಲೆ ಮೇಲೆ ಮಡಗಿ ಸೂರ್ಯ ದೇವರಿಗೆ ಅಕ್ಕಿ ಹಾಕಿ ಕೈಯಿ ಮುಗ್ದ್ ಅಗೆಗೆ ಅಕ್ಕಿ ಹಾಕಿ ಕೈ ಮುಗ್ದ್ ಅಗೆ ಕೀಳಕು. ಸಣ್ಣ ಸಣ್ಣದ್ ಮೂರು ಕಂತೆ ಕಟ್ಟಿ ಅಗೆತ್ತರ ಮಡಗುವೆ. ಇನ್ನ್ ಯಾಗ ಬೇಕಾದರ್ ಅಗೆ ತೆಗೆದ್ ನಾಟಿ ಕೆಲಸ ಮಾಡಕ್. ಗದ್ದೆಯ ಕೆಳಬದಿ ಏರಿಗೆ ನೀರ್ ಹೋಗದಂಗೆ ಗಂಡ್ ಜನ ಮಣ್ಣ್ ಮಡಗಿ ಕೊಟ್ಟಲಿ ಸಾರಿಸಿದಂಗೆ ಮಾಡುವೆ. ಇನ್ನ್ ಒಂದು ದಿನಕೆ ಮುಂದೆ ನಾಟಿಗೆ ಇದ್ದ ಅಗೆ ತೆಗ್ದ್ ಮಡಗುವೆ ಹೆಣ್ಣ್ ಜನ. ಮಾರನೆ ದಿನ ಜನ ಕರಕಂಡ್ ನಾಟಿ ಕೆಲಸ ಮಾಡವೆ.

ನಮ್ಮ ಕಾಲಲ್ಲಿ ನೆರೆ ಮನೆವು ಮನೆವು ಕೂಡಾಡಿಕಂಡ್ ಕೆಲಸ ಮಾಡ್‌ತ್ತಿದ್ದೊ. ಯಾರ್ದಾದರ್ ದೊಡ್ಡಗದ್ದೆ ಇದ್ದರೆ ಓಟುಗದ್ದೆ ಮಾಡುತ್ತಿದ್ದೊ.

ಓಡಿಕೆ ಆ ಗದ್ದೆಗೆ ಐದು ಕೊಡಿ ನಾಟಿ ನೆಟ್ಟಂಗೆ ನೆಡುತ್ತಿದ್ದೊ. ದೊಡ್ಡ ಗದ್ದೆ ನಾಟಿ ನಡಿಕೆ ಇಪ್ಪತ್ತು ಜನ ಬೇಕಿತ್ತ್. ನಾಟಿ ಗದ್ದೆ ಕೂಡುಕ್ಕನ ಗಂಡ್ ಜನ ಹೊಯ್ಯ ಹಾಕ್‌ತ್ತಿದ್ದೊ. ಹೊಯ್ಯ ಹಾಕ್‌ಕನ ಹಿಂಗೆ ಹೇಳ್ದು: ಓ ಪೊಣ್ಣಗ್

ಮೇಲೆ ಬಿರ್‌ವತ್ತಿ ಪೊಣ್ಣ್ ಹೋ ಹೊಯ್ಯ. ಅಲ್ಲಿದ್ದ ಗಂಡ್ ಜನ ಸೇರ್ದ್ವವು ಎಲ್ಲಾದಕು ಹೋ ಅಂತ ಹೇಳಕು. ಆಣಾಗ್ ಮೇಲ್ ಬಂಟರೆ ಆಣ್ ಹೋ ಹೊಯ್ಯ. ಗಂಡ್ ಜನ ರಾಗ ಕೊಡಕು. ಓ ದೇವರೆ ಕಂಡ ಹೋ ಹೊಯ್ಯ. ಆಟಿತ್ತ್ ಬೊಳ್ಳ ನೀರ್‌ತೆ ಪೊಂಡೆ ಹೋ ಹೊಯ್ಯ. ಈಗ ಎಲ್ಲಿ ಉಟ್ಟು ಓಟುಗದ್ದೆ. ಎಲ್ಲಿಯಾದರು ಇದ್ದರು ಸಹ ಹೊಯ್ಯ ಪದಕಲ್ತವು ಇಲ್ಲೆ. ಹೊಯ್ಯ ಹಾಕವು ಇಲ್ಲೆ. ಈಗಿನ ನಾಟಿಗದ್ದೆವು ತಮಾಷೆಗೆ ಬೊಬ್ಬೆ ಹಾಕುವೆ. ಗದ್ದೆಲಿ ಓಡಿಕೆ ಬಂದವು ರೆಡಿಯಾಗಿ ಕೊಡಿ ನಾಟಿಗೆ ಐದು ಜನ ಓಡಿಕೆ ನಿಂತವೆ. ನಿಂತ ಜನಕೆ ವಿಷ್ಲ್ ಹಾಕುವೆ. ಐದ್ ಜನ ಕೊಡಿನಾಟಿಲಿ ಓಡುವೆ. ಆಗನ ಕಾಲಲ್ಲಿ ಸೂರೂಗೆ ಬಂದವಕೆ ದುಡ್ಡು ಎರಡನೆ ಬಂದವಕೆ ಬಾಳೆಗೊನೆ ಮೂರನೆ ಬಂದವಕೆ ತೆಂಗಿನ ಕಾಯಿ ನಾಲ್ಕನೆ ಬಂದವಕೆ ಎಲೆ ಅಡಿಕೆ. ಮೂವತ್ತು ನಲವತ್ತು ವರ್ಷದ ಹಿಂದೆ ನಾಟಿ ಗದ್ದೆಯಲ್ಲಿ ಓಡ್ದವಕೆ ಇದೆ ಇನಾಮು.

ಮಳೆಗಾಲ ಕಳ್ತ್. ನಾಟಿ ನೆಟ್ಟ ಗದ್ದೆನ ಕಳೆತೆಗೆದು ಕೆಲಸ. ಅಷ್ಟೊತ್ತಿಗೆ ಕೈಲ್ ಪೋದ್ ಹಬ್ಬ ಬಾತ್. ಸೆಪ್ಟಂಬರ್ ಮೂರಕ್ಕೆ ಎಲ್ಲರ ಮನೆಲಿ ಹಂದಿ ಮಾಂಸ ಸಾರ್, ಕಡಿಂಬಿಟ್ ಇಡ್ಲಿ ಕೋಳಿ ಸಾರ್ ರಂ, ಬ್ರಾಂಡಿ ಬೀರ್ ಕುಡ್ದ್ ತಿಂದ್‌ಕಂಡ್ ಮಜ ಮಾಡುವೆ. ದೊಡ್ಡ ಮನೆಗಳಲ್ಲಿ ಕೋವಿ ಕತ್ತಿಗಳಿಗೆ ಪೂಜೆ ಮಾಡುವೆ. ಮತ್ತೆ ಮರದ ಕೊಡಿಲಿ ತೆಂಗಿನಕಾಯಿ ಕಟ್ಟಿ ಗುಂಡು ಹೊಡ್ದವೆ. ಇನ್ನ್ ಬಾದು ಆಟಿತಿಂಗ. ಆಗೋಸ್ಟು ಮೂರು ಆಟಿತಿಂಗ ಹದಿನೆಂಟು. ಆ ದಿನ ಎಲ್ಲಾವರ ಮನೆಲಿ ವರ್ಷಕೊಮ್ಮೆ ಮದ್ದುಗೂಳಿ ಪಾಯಸ ಮಾಡುವೆ. ಮದ್ದು ಸೊಪ್ಪುಲಿ ಹದಿನೆಂಟು ತರದ ಮದ್ದು ಇದ್ದದೆ ಗಡ ಹಿರಿಯರ ಮಾತ್. ಹದಿನೆಂಟ್ ತರದ ಖಾಯಿಲೆ ಇದ್ದರೆ ಯಾದರ್ ಒಂದು ಕಾಯಿಲೆಗೆ ಮದ್ದು ಆದೆ. ಹಿರಿಯರ ಮಾತ್ ಸತ್ಯ ಅಂತ ನಂಗೆ ಅನಿಸಿದೆ.

ಇನ್ನ್ ಬಾದ್ ಕಾವೇರಬ್ಬ, ಅಕ್ಟೋಬರ್ ಹದಿನೇಳಕ್ಕೆ ಗದ್ದೆಗಳಿಗೆ ಮನೆಗಳಿಗೆ ಒಕ್ಕಲು ಕಳಕೆ ದನದ ಕೊಟ್ಟಿಗೆ ತೋಟಕೆ ಇನ್ನ್ ಏನೆಲ್ಲಾ ಉಟ್ಟು ಅದಕೆಲ್ಲ ಬೆತ್ತ್ ಕುತ್ತಿ ನೊಕಟೆ ಬಳ್ಳಿನ ಬೆತ್ತ್‌ನ ತುದಿ ಬಾಗಕೆ ಹಾಕಿ ಬೆತ್ತ್‌ಗಳ ಕುತ್ತುವೆ.

ಹದಿನೆಂಟನೆ ತಾರೀಕ್‌ಲಿ ಗದ್ದೆಲಿ ಕಾವೇರಮ್ಮನ ಹೆಸರೇಳಿ ದೋಸೆ ಹಿಟ್ಟ್ ಮಡಗುವ ಪದಿಷ್ಟ ಉಟ್ಟು. ಎಕಲ್ ಗದ್ದೆಲಿ ಏರಿಮೂಲೆಲಿ ಮೂರು ಬೆತ್ತ್‌ಗಳ

ಕುತ್ತಿ ನೊಕಟೆ ಒಳ್ಳೆ ಮಾಂಸರು ಬೆತ್ತಿಗೆ ಸಿಂಪೆನಂಗೆ ಮಾಡಿ ತುರ್ತಾರ್. ದೋಸೆ ಹಿಟ್ಟ್ ಮಾಡಿಸಿ ಹೇಳಿ ಮಾತ್ "ಈ ತಿಂಗಳಲ್ಲಿ ಅಕ್ಕಿ ಬಡೆದು ಆ ತಿಂಗಳಲ್ಲಿ ದೋಸೆ ಹೊಯ್ತು". ಹಿಂದಿನ ಕಾಲಲ್ಲಿ ನಾಲ್ಕ್ ಗಂಟೆ ರಾತ್ರಿ ಎದ್ದ್ ಬೆಳ್ತ್‌ಗೆ ಐದ್ ದೋಸೆನ ಮಡಗಿವೆ. ಎರಡ್ ಕೊಡಿ ಬಾಳೆಲೆ ಮೇಲೆ ಹಿಟ್ಟ್ ಮಡಗಿ ಅದರ ಮೇಲೆ ಐದು ಬಾಳೆ ಹಣ್ಣ್‌ನ ಸುಲ್‌ದ್ ಮಡಗಿ ಹಸುವಿನ ತುಪ್ಪ ಹೊಯ್ದ್ ಕಾಯಿಸ ಬೆಲ್ದ್ ನಾಕಿ ಕೊಡಿಬಾಳೆಲೆ ಮೇಲೆ ನೆಣೆ ಹೊತ್ತಿಸಿ ದೋಸೆ ಹಿಟ್ಟ್‌ನ ಬೆತ್ತ ಮೇಲೆ ಮಡಗಿ "ಕಬ್ಬತ್ತ್ ಕೈ ಬಳ್ಳಿ ಕೂ ಹೂ" ಹಂಗೆ ಕರೆಯುತ್ತಿದೊ. ಕಾವೇರಮ್ಮನ ವರ್ಷಕ್ಕೊಂದು ಸತಿ ಪಾಂಡವು ಬಂದ್ ನಮ್ಮ ಭೂಮಿ ಬುಟ್ಟ್ ಕೊಡಿತ್ತ ಕೇಳಿವೆ. ನಂಗೆ ಕೊಡಿ ಕಟ್ಟಿಯಳೋ. ಬರುವ ವರ್ಷಕೆ ಬುಟ್ಟ್ ಕೊಟ್ಟನೆಂತ ಹೇಳ್ದಗಡ.

ಅಕ್ಟೋಬರ್ 27ಕ್ಕೆ ಪತ್ತಲೊದಿ. ಕಳಕೆ ಬೆತ್ತ್‌ಕುತ್ತುವೆ. ಅಲ್ಲಿ ಬೆತ್ತ್‌ಸುತ್ತ್ ಹೆರ್ತೆ ಮಾಡುವೆ. ಇನ್ನ್ ಎಲ್ಲಿ ಬೇಕಾದರ್ ಹೆರ್ತೆ ಮಾಡಕ್. ಆ ದಿನ ಮಕ್ಕಳ ಕಿವಿ ಮೂಗು ಚುಚ್ಚಿಕೆ ಒಳ್ಳೆಯ ದಿನ. ಇನ್ನ್ ನೆಟ್ಟ ಬೆಳೆ ಹಣ್ಣಾಗುತ ಉಟ್ಟು ಬೆಳೆ ಕೊಯ್ಯ ಕೆಲಸ ಬಾತ್ ಮಳೆ ಪಾರಾಕಾಯಿತ್ತ ಉಟ್ಟು. ಮೂರು ವರ್ಷ ಬೆಳೆ ಕೊಂಪ್ದ್ ನಾಶಿಪಂಗೆ ಮಳೆ ದೊಡ್ದ್ ಭತ್ತ ಎಲ್ಲಾ ಹಾಳಾತ್. ಈ ವರ್ಷ ಏನ್ ಮಾಡ್ದೊ ಮಳೆರಾಯ. ರೈತರ ಗೋಳು. ಕಾಫಿ ತೋಟಲಿ ಕಾಫಿ ಇಲ್ಲೆ. ಒಳ್ಳೆ ಮೆಣಸು ಇಲ್ಲೆ. ಹಳ್ಳಿಯ ರೈತಂಗ ಬೆವರು ಸುರಿಸಿಕಂಡ್ ದುಡಿಯುದು ಒಂದೆ ಕೆಲಸ.

✍ಕಾಳಿಯಂಡ ತಂಗಮ್ಮ ಅಪ್ಪಚ್ಚ

ಕತೆ, ಕವನ ಅಥವಾ ಲೇಖನ ಬರೆವ ಮಕ್ಕ ತಮ್ಮ ಇಸ್ಕೂಲ್‌ನ ಮುಖ್ಯಸ್ಥರ್‌ಂದ ದೃಢೀಕರಿಸಿ ಕಳ್ಸಕೊಡಿ.

# ಗಾದೆ ಗಮ್ಮತ್ತ್ (ಹಿಂದೆನ ಸಂಚಿಕೆಂದ)

168. ದಂಡ್‌ಗೆ ಹೆದರಿ ಕೆರೆಗೆ ಹಾರ್ದಂಗೆ
169. ಹಾಲ್ ಎಸ್‌ಂಡ್ ಹಿಡಿಯಕೆ ಹೋಗುಟು.
170. ಕಚ್ಚೆ ಪಾಕಿ ಕೆಸರ್‌ಲಿ ಹೋದಂಗೆ.
171. ಕೆಸರ್ಗ ಕಲ್ಲ್ ಹೊಡ್ದಂಗೆ
172. ಹಸಿ ಗೋಡೆಗೆ ಕಲ್ಲ್ ಇಟ್ಟಂಗೆ.
173. ಮುಟ್ಟೊಕು ಈಗ ಹಾಕಿದ ಕಡು.
174. ಬೆಣ್ಣೆ ಮೇಲೆ ಕುದೋಲು ಎಳ್ದಂಗೆ.
175. ಕಡ್ದವೆ ಮೊಜ್ಜಿಗೆ ಯಾರೊಬ್ಬ ಸರಿ ಇಲ್ಲೆ.
176. ಸೇಂಕಿದೆ ಬಾರಿ ಹಾದುಟ್ಟು ಎಮ್ಮೆ
177. ತುಪ್ಪ ಕೈಲಿರ್‌ಕನ ಬೇರೆವರ ಚೆಟ್ಟಿಗೆ ಕೈ ಹಾಕಿದೆ.
178. ಬಂದಷ್ಟೆ ಬರ್ಲಿ ಬರ್ಡೆಮ್ಮೆ ಹಾಲ್.
179. ಆರೆಡೆಗೆ ಇರ್ಲಿಕಂಡ್ ಮೂರೆಡೆಗೆ ಸಾರ್ದೆ.
180. ಅಂಟಿಟು ಮಳ್‌ಕೋಲು ಎಲ್ಲಿಗೆ ಬುಡ್ದು.
181. ಸಮಯಕ್ಕೊದಗದ ಮಾತ್ ಇದ್ದೇನ್ ಪ್ರಯೋಜನ.
182. ಆಡ್‌ನ ತಡೆಕೋಗಿ ಹೋತ ಬಲಿ ಆತ್.
183. ಅಲ್ಪೆಲಿ ನೀರ್ ತಂದಾಂಗಾತ್.
184. ಹೊಸ ನೀರ್ ಬಂದ್ ಹಳೆನೀರ್ ತಕಂಡೋಕು.
185. ಕಂದಡಿಗೆ ಹಾಲ್ ಕೊಟ್ಟಾಂಗೆ
186. ಮಣ್ಣ್ ಕೆಂಪಾಕನ ಕಣ್ಣ್ ಉರಿ ಆದೆ.
187. ಬೀದಿ ಬಸವನ ಹಂಗೆ.
188. ಗೂಳಿಗೇನ್ ಗೊತ್ತು ಹೂಡುವೆತ್ತ್‌ನ ಕಷ್ಟ.
189. ಕಣ್ಣ್ ಕಟ್ಟ್ ಎಷ್ಟೊತ್ತು ನಿಲ್ಲುದು.
190. ತಾಯ್ತನದ ಬೇನೆ ತಿಳ್ದವುಕೇ ಗೊತ್ತು.
191. ಇರ್ಕನ ಕಣ್ಣುರಿ ಹೋದಮ್ಯಾಲೆ ಹೊಟ್ಟೆ ಉರಿ.
192. ಮನೆಲಿ ನಿಧಿ ಇರ್ಲಿ ಊರೆಲ್ಲ ತಿರ್ಗಿತ್.
193. ಕೈಲಿದ್ದ ಹಕ್ಕಿ ಬುಟ್ಟು ಹಾರುವ ಹಕ್ಕಿಗೆ ಒಡ್ದತ್.
194. ಬೈನ ಬೇರ್ ಬುಟ್ಟು ಮರದ ಬೇರ್ ಎಳ್ಳಿಕೋತು.

195. ಕೂಳಿಲಿ ಇದ್ದ ಮೀನ್ ಬುಟ್ಟ್ ಗೋರಿಲಿದ್ದ ಮೀನ್ ಹಿಡ್ದದೆ.

196. ಎಲ್ಲ ಬುಟ್ಟ್ ಕುಡೆವ ನೀರಿಗೆ ಉಚ್ಚೆ ಹೊಯ್ತ್.

197. ಹಾಲನ್ನ ಇರ್ಕನ ಹಲ್ಸ್‌ನ್ನಕ್ಕೆ ಕೈ ಹಾಕಿತ್.

198. ಎಂಜಿಲೆಲೆ ನೆಕ್ಕುವ ನಾಯಿಗೆ ತುಪ್ಪದನ್ನ ಕೊಟ್ಟಾಂಗೆ.

199. ಹಾಲಿಗೆ ಹುಳಿ ಹಿಂಡುವೆ ಅಂತವರೇನ್ ಸುಖ.

200. ಕ್ಯಾಮನ ಕಾಂಬಕನ ಕಡ್ಡೆವೆನ ಬುಟ್ಟತ್.

201. ದೂಜಿಗೆ ಬಡ್ಗೆ ಹಾಕವರನ್ದ ಮೂಟೆ ಹೊರುವನೇ ಮೇಲ್

202. ಚೊಂಟೆ ನೇಯಿವವಂಗೆ ಮಳೆ ನೀರ್ ಬಂದಾಂಗೆ

203. ಹಳ್ಳಲಿ ಹೋವಂಗೆ ಹುಲ್ಲುಕಡ್ಡಿ ಆಸರಾತ್

204. ಹಡಗ್‌ಲಿ ಹೋವವಂಗೆ ಬಿರುಗಾಳಿ ಎದ್ರಾದಂಗೆ.

205. ಹಳ್ಳ ದಾಟ್‌ಕನ ಸುಳಿಲಿ ಸಿಕ್ಕಿದಂಗೆ.

206. ಉಚ್ಚೆಗೆ ಗಾಳ ಹಾಕುವಂವ

207. ಒನ್ಕೆಂದ ನಾರ್ ತೆಗೆವಂವ

208. ಮೊಜ್ಜಿಗೆಂದ ಬೆಣ್ಣೆ ಎದ್ದ್ ಬಂದಾಂಗೆ

209. ಸೆಗಣಿಲಿ ಹುಳ ಹುಡ್ಕಿದಂಗೆ (ಇದ್ದಂಗೆ)

210. ಬಾಳುವ ಮಕ್ಕಳ ಹೇಲ್ ನೋಡನ ಗೊತ್ತಾದೆ.

211. ಅತ್ತಿ ಹೂವು ಕ್ಯೊದೊವು ಇಲ್ಲೆ.

212. ನಾಯಿಮಡೆ ನಾಯಿಗೆ

213. ತಾಳಿದವುಕೆ ಬಾಳುಟ್ಟು.

214. ಹಗೆಯ ಹೊಗೆ ಸಾಯಕನ ಮುಟ್ಟ.

215. ಹಾಲುಂಡ ಮನೆಗೆ ಕೇಡ್ ಬಗ್ದಂಗೆ.

216. ಅನ್ನ ಕೊಟ್ಟ ಮನೆಗೆ ಕನ್ನ ಹಾಕಿದಂಗೆ.

217. ಬೆಳೆವ ಸಸಿ ಮೊಳಕೆಲಿ ಕಂಡದೆ.

218. ಕಾಂಬಕೆ ಬೆಣ್ಣೆ ನೋಡಿಕೆ ಸುಣ್ಣ

219. ಹಣೆಲಿ ಬರ್ದದ್ ಎಲೆಲಿ ಉಜ್ಜಿರು ಹೋಕಿಲೆ.

220. ಅಗೋಳಿ ಮಂಞಣ್ಣಂಗೆ ಗಡಾಯಿ ಕಲ್ಲ್‌ಲಿ ಆಸೆ.
ನಮ್ಮ ತಿಮ್ಮಂಣಂಗೆ ಬಟ್ಟಲ್ ಪುಂಡಿಲಿ ಆಸೆ.

221. ಗೊರ್ಕೆ ಹೊಡ್ದದೆ ಕುಂಭಕರ್ಣನಂಗೆ.

222. ಸಾರ್ದ್ದೆ ನೋಡು ಮುಂಗ್ಲಿ ನಂಗೆ

223. ಬುಟ್ಟದೆ ನೋಡು ಮೊಸಳೆ ಕಣ್ಣೀರ್

224. ಹಂಣ್ ಇದ್ದ ಮರಕ್ಕೆ ಹಕ್ಕಿಗ ಬರೋಕೆ ಹಂಗೆ
ಹೆಂಣ್‌ಗ ಇದ್ದ ಮನೆಗೆ ಗಂಡ್‌ಗ ಬಂದವೆ.

225. ಕುರೆಗೆ ಕಳ್ಳ್ ಕುಡ್ಸಿದಂಗೆ.

226. ಹಂದಿ ಹೋಗಿ ಎಮ್ಮೆಗೆ ಒರ್ಸಿದಂಗೆ.

227. ಕುರೆಗೇನ್ ಗೊತ್ತು ವಜ್ರದ ಬೆಲೆ.

228. ಕರಿನಾಯ್ನ ಬಿಳಿನಾಯಿ ಮಾಡಿದಂಗೆ.

229. ಬಾಳೆ ಮೀನ್ ಮತ್ತು ಮುಗುಡು (ಬರೆಮೀನ್) ನಂಗೆ.

230. ಮುಗುಡು ಇರುವ ಕೆರೆ ನೀರ್ ಶುದ್ಧ ಇರಿಕಿಲ್ಲೆ.

231. ಗದ್ದೆಲಿ ಕುರ್ರು ಕಲ್ಲ್ ಎಳ್ದಂಗೆ.

232. ಪೆರ್ಚಿನ ಕುರೆಗೆ ದೆವ್ವ ಕಂಡಂಗೆ.

234. ಮೊಲೆ ಎದೆಲಿ ಮೂಡ್‌ಕನ ದೇಶ ಕಾಂಬೊದಿಲ್ಲೆ.

235. ಹೊಟ್ಟೆಗಿಲ್ಲದವಂಗೆ ಮೃಷ್ಟಾನ್ನ ಕೊಟ್ಟಾಂಗೆ.

236. ಬೆದ್‌ರ್ ಕಟ್ಟೆ ಹೋಕನ ಕಾಡ್‌ಕೋಳಿಗೂ ಹಾಂಕಾರ.

237. ಕೊತ್ತಿಗೆ ಗಂಟೆ ಕಟ್ಟಿದಂಗೆ.

238. ಹೊಂಡದ ಮೊಣ್ಣು ಹೊಂಡಕ್ಕೆ ಸಾಲದ್.

239. ಎಣ್ಣೆ ಗಡಿಗೆ ಬಿದ್ದ್ ಅಳ್‌ಕನ ನೀರ್‌ನ ಗಡಿಗೆ ಹಾರೆ ಕಂಡ್ ಅತ್ತತ್ತ್‌ಗಡ.

240. ರಾವಣನ ಹೊಟ್ಟೆಗೆ ಒಂದು ಲೋಟ ನೀರ್ ಕೊಟ್ಟಾಂಗೆ.

241. ಇಂದ್ರಂಗೆ ಮೊಜ್ಜಿಗೆ ಸರ್ವದಾ ಸಿಕ್ಕಿಕಿಲ್ಲೆ.

242. ಕಾರ್ಯಕೋಕನ ಉರಿಯೋಳು ಅಡ್ಡ ಬಂದಾಂಗೆ.

243. ನಾಗರಹಾವುನ ಕಂಡುಟು ಮತ್ತೆಲ್ಲಿ ಕಾರ್ಯ ಆದೆ.

✍'ಮಾಲಾಗೌ'

ಮನೆಮದ್ದ್–1

## ಆರೋಗ್ಯದ ಸಂಜೀವಿನಿ ಆಡ್‌ಸೋಗೆ

ಆಡ್ ಮುಟ್ಟದ ಸೊಪ್ಪಿಲ್ಲೆತ್ತೇಳಿ ಗಾದೆ ಮಾತ್‌ಟ್ಟು. ಆಡ್ ಸೋಗೆಂದ ಮಾತ್ರ ಆಡ್ ದೂರ ನಿತ್ತದೆ. ಹಂಗಾಗಿ ಹೆಚ್ಚಿನ ತೋಟಗಳ್‌ಲಿ ಆಡ್ ಸೋಗೆನ ಬೇಲಿಗಾಗಿ ಬೆಳ್‌ಸುವೆ. ಆಡ್ ಸೋಗೆ ಬೇಲಿಗೆ ಅಲ್ಲದೆ ನಮ್ಮ ಬದ್‌ಕ್‌ಗೆ ಬೆಳಕಾದೆ.

"ವಾಸಯಾಂ ವಿದ್ಯ ಮಾನಾಯಂ ಆಶಾದಾಂ ಜೀವಿತಸ್ಯಚ" ತ್ತೇಳಿ ಜನಪ್ರಿಯ ಸಂಸ್ಕೃತ ಸುಭಾಷಿತ. ಆಡ್ ಸೋಗೆಂದ ಜೀವನ ಮಾಡ್‌ವ ಆಸೆ ಇಟ್ಟ್‌ಕಣಕ್. ರಕ್ತಪಿತ್ಥ, ಕ್ಷಯದಂತಾ ತೊಂದರೆಂದ ನರಳುವ ಕಾಯಿಲೆಲಿ ಸಹ ಸಾಯಕ್ಕಿಲ್ಲೆತ್ತೇಳಿ ಈ ಸುಭಾಷಿತದ ಅರ್ಥ.

ಉಬ್ಬಸ, ಕ್ಷಯದಂತಹ ಕಾಯಿಲೆ ಬಂದರೆ ಬಾಳ ದಿನಗಳವರೆಗೆ ಹೋಗದೆ ಪೀಡ್‌ಸ್‌ತ್ತಿದ್ದದೆ. ಇಂತ ಕಾಯಿಲೆಗಳಿಗೆ ರಾಮಬಾಣ ಆಗುವ ಆಡ್ ಸೋಗೆಯ ವೈಜ್ಞಾನಿಕ ಅಡತೋಡಾ ವಾಸಿತಾತ್ತೇಳಿ ಗುರುತಿಸಿಟು. ಸಿಂಹದ ಬಾಯಿನ ಹೋಲುವ ಬಿಳಿಯ ಹೂವುಗಳನ್ನ ಬುಡ್‌ದರ್‌ಂದ ಸಿಂಹಾಸ್ಯ, ಸಿಂಹ ಮುಖೀತ್ತೇಳುವ ಹೆಸ್‌ರ್‌ನ ಪಡ್‌ದುಟ್ಟು. ಉದ್ದದ ಎಲೆಗಳ ತುದಿ ಚೂಪಾಗಿದ್ದದೆ. ಅಚ್ಚ ಹಸ್‌ರ್ ಬಣ್ಣಂದ ಕೂಡಿಕಂಡ್ ಅದರ ಬುಡ ಸಹ ಕಾಣದಂಗೆ ಬೆಳ್‌ದದೆ. ಯಾವ್‌ದೆ ಗೊಬ್ಬರ ಆರೈಕೆ ಇಲ್ಲದೆ ಬೆಳೆದ್ರಂದ ಬೇಲಿಗಳ್‌ಲ್ಲಿ ನೆಟ್ಟ್ ಬೆಳ್‌ಸಿ ಇದರ ಎಲೆಗಳನ್ನ ಒಣ್‌ಂಗಿಸಿ ಮಾರಾಟನೂ ಮಾಡಕ್.

ಎಲೆ ಕಹಿ, ಒಗರ್‌ರಸ ಉಟ್ಟು, ಶೀತ ಗುಣನ ಹೊಂದಿಟ್ಟು ಜ್ವರ, ಕೆಮ್ಮು, ಶೀತ, ಸಕ್ಕರೆ ಕಾಯಿಲೆ, ಚರ್ಮದ ಕಾಯಿಲೆ ಗುಣ ಪಡಿಸಿದೆ. ಅಲ್ಲದೆ ಹೃದಯಕ್ಕೂ ವಳ್ಳದ್. ಮನೆಲಿ ಮಕ್ಕ ಕೆಮ್ಮು ಬಂದ್ ಸೋತಿದ್ದರೆ ಒಂದು ಚಮಚ ಆಡ್ ಸೋಗೆ ರಸಕ್ಕೆ ಜೇನ್‌ನೊಟ್ಟಿಗೆ ದಿನಕ್ಕೆರಡ್ ಸಲ

ಕೊಟ್ಟರೆ ಒಳ್ಳದಾದೆ.

ನೆಗ್‌ಡಿಂದ ತಲೆಭಾರ. ಮೂಗು ಕಟ್ಟ್‌ದು ಆದರೆ ಕೊದ್ಯವ ನೀರ್‌ಗೆ ಆಡ್‌ಸೋಗೆ ಎಲೆಗಳನ್ನ ಹಾಕಿ ಬಿಸಿ ಶಾಖ ತಕಂಡರೆ ಕಫ ನೀರಾಗಿ ತಲೆಭಾರ, ತಲೆ ಬೇನೆ ದೂರಾದೆ.

ಅಸ್ತಮಾ ಕಾಯಿಲೆ ಇರುವವು ಆಡ್‌ಸೋಗೆಂದ ಮಾಡ್‌ದ ಎಂಣೆ (ಘೃತ) (ತುಪ್ಪ) ಹಂಞ ಜೇನ್‌ಸೇರ್‌ಸಿ ತೆಗ್‌ದ್‌ಕಣಕು. ಒಣ್‌ಗಿದ ಎಲೆಗಳನ್ನ ಸುಟ್ಟ್ ಅದರ ಹೊಗೆ ಸೇದ್‌ದು ಕೂಡ ವಳ್ಳದ್. ಹೂವುನ ಒಣ್‌ಂಗಿಸಿ ಹೊಡಿ ಮಾಡಿಟ್ಟ್‌ಕಂಡ್ ಜೇನ್‌ನೊಟ್ಟಿಗೆ ಬೆರ್‌ಸಿ ಮೂಗ್‌ನ ರಕ್ತಸ್ರಾವ ಸಮಯಲಿ ನೆಕ್ಕಿಸಕು.

ಆಮವಾತ ಅಲ್ಲರೆ ಬಾಪು ಬಂದ ಸಮಯಲಿ ಆಡ್ ಸೋಗೆ ಎಲೆ ಹೂವು ಅರ್‌ದ್ ಲೇಪ ಹಾಕಿರೆ ಬಾಪ್ ಕಮ್ಮಿ ಆಗಿ ಬೇನೆ ಕಮ್ಮಿ ಆದೆ. ತಲೆ ಬೇನೆ ಆಕನ ಎಲೆನ ಅರ್‌ದ್ ಹಣೆಗೆ ಪೂಜಿ ಲೇಪ ಹಾಕ್ಕಕು. ಗಾಯ ಆದರೆ ಎಲೆ, ಬೇರ್, ದಂಟ್ ಸಮೇತ ಅರ್‌ದ್ ಪೂಜಿರೆ ಗಾಯ ಬೇಗ ಗುಣ ಆದೆ.

ಕೋಟಲೆ, ಕೋರ, ದಡಾರ ಆಗುವ ದಿನಗಳ್‌ಲಿ ನೀರ್ ಮೀಸುವ ದಿನದಂದ್ ಕಹಿಬೇವು, ಆಡ್ ಸೋಗೆನ ನೀರ್‌ಗೆ ಹಾಕಿ ಕೊದ್‌ಸಿ ಮೀಸುದು ಹಿಂದೆಯೇ ಬಂದ ಸಂಪ್ರದಾಯವಾಗಿಟ್ಟು. ವೈರಾಣ್ ಬ್ಯಾಕ್ಟೀರಿಯಾಗಳ ವಿರುದ್ಧ ಹೋರಾಡುವ ಶಕ್ತಿನ ಅದ್ ಹೊಂದಿಟ್ಟುತ್ತೇಳಿ ಸಾಬೀತ್ ಪಡಿಸಿಟು.

"ವೈದ್ಯ ಮಾತಾ" ಅಂದರೆ ವೈದ್ಯರಿಗೂ ಅಮ್ಮನ ಸಮಾನ ಆದ ಈ ದೆಯಿ ಸಂಜೀವಿನಿಯಾದ ಸಕಲ ಕಾಯಿಲೆಗಳನ್ನ ಗುಣ ಪಡ್‌ಸ್‌ವ ಸಾಮರ್ಥ್ಯ ಇರ್‌ದ್ರಂದ ಆರೋಗ್ಯ ಸಂಜೀವಿನಿತ್ತೇಳಿ ಕರ್‌ಸಿ ಕಂಡದೆ. ಇದನ್ನ "ಹಿತ್ತಲ ಗಿಡವೇ ಮೊದ್ದು"ತ್ತೇಳಿ ತಿಳ್‌ಕಂಡ್ ಸರಿಯಾದ ರೀತಿಲಿ ಬಳ್‌ಸುದು ಒಳ್ಳೇ ಜಾಣತನಾಂತ ನನ್ನ ಅನಿಸಿಕೆ.

ಮನೆಮದ್ದ್-2

# ದಾಸಾಳದ ಹೂವು

ದಾಸಾಳ ಎಲ್ಲವುಕೂ ಗೊತ್ತಿರುವ ದೆಯಿ. ಹಳ್ಳಿಂದ ದಿಲ್ಲಿವರೆಗೆ ಎಲ್ಲವರ ಮನೆ ಜಾಲ್‌ಲಿ ಪೊರ್‌ಲ್ ಕಾಣ್ಸ್‌ವ ದಾಸಾಳಲೀ ನೂರಾರ್ ತರದ್ ಉಟ್ಟು. ರಕ್ತಾಂಬರ ನೆನಿಸಿದ ಗಣಪತಿ ದೇವ್ರ್‌ಗೂ ದುರ್ಗೆ ದೇವಿಗೂ ಪ್ರಿಯವಾದ ಈ ಮುದ್ದಿನ ಹೂ ನಮಿಗೆಲ್ಲವುಕು ಪ್ರಿಯವಾದದ್ದ್. ತಿಂಬಕ್ಕಾಗಿ, ಮೊದ್ದಿಗಾಗಿ, ಅಲಂಕಾರಕ್ಕಾಗಿ ಇರುವ ದೆಯಿ. ಇದರ ಸಸ್ಯ ಶಾಸ್ತ್ರೀಯ ಹೆಸರ್ ರೋಸಾ ಸಿನೆಸಿಪ್ ಮ್ಯಾಲೋವೇಸಿಯ ಕುಟುಂಬಕ್ಕೆ ಸೇರಿಟ್ಟು, ಸಂಸ್ಕೃತ ಸಾಹಿತ್ಯಲಿ ಪ್ರೀತಿಂದ ಕರ್‌ದ ಹೆಸರ್ ರುದ್ರಪುಷ್ಪ, ಹರಿ ವಲ್ಲಭೆ, ಕನ್ನಡಲಿ ದಾಸವಾಳ. ಬಿಳಿಯರ್ (ಇಂಗ್ಲೀಷರ್) ದಾಸಾಳದ ಹೂವುನ ಗುದ್ದಿ ಶೂಗಳಿಗೆ ಪಾಲಿಸ್ ಮಾಡ್‌ತ್ತಿದೊಂತ ಹೇಳ್‌ವೆ. ಹಂಗಾಗಿ ಇಂಗ್ಲೀಷ್‌ಲಿ ಇದಕ್ಕೆ ಶೂ ಫ್ಲವರ್ ಅಂತ ಹೆಸರ್ ಉಟ್ಟು.

ನಮ್ಮ ದೇಶಲೀ ಸಾವಿರಾರ್ ವರ್ಷಂದ ಬೆಳ್‌ಸಿರೊ ದಾಸಾಳದ ತವರ್ ಹವಾಯಿ ದ್ವೀಪತ್ತೇಳ್‌ವೆ. ಇದರ ಮೂಲ ಕೆಂಪು, ಬಿಳಿ, ಗುಲಾಬಿ, ಹಳದಿ ಮತ್ತೆ ಕೆಂಬಣ್ಣದ ಕತ್ರಿತ್ತೇಳಿ ಐದೇ ಜಾತಿ ಇದ್ದರೂ ಕೂಡ ಕೃಷಿ ಸಂಶೋಧಕರ್ ಒಂದೇ ದೆಯಿಲಿ ಎಷ್ಟೊ ತರದ್ ಆದೆ. ಇಷ್ಟೇ ಉಟ್ಟುಂತ ಹೇಳ್‌ಕೆ ಲೆಕ್ಕ ಸಿಕ್ಕ್‌ಕ್ಕಿಲ್ಲೆ. ದಾಸಾಳ ಹೂಗೆ ಪೊರ್ಮ್ಮಳ ಇಲ್ಲೆ. ಇದಕ್ಕೆ ನೆತ್ತರ್‌ನ ಸುದ್ದ ಮಾಡುವ ಗುಣ ಉಟ್ಟು. ಎದೆ ಬೇನೆಗೆ ಇದರ ಕಷಾಯ ಒಳ್ಳೆದ್. ತಲೆ ಕೂದಲಿಗೆ ತಂಪು ಮಾತ್ರ ಅಲ್ಲದೆ ಹೊಳ್ಪು ಕೊಟ್ಟದೆ. ಸಂಸ್ಕೃತಲಿ "ಜಪಾ ಕುಸಿಮಂ ಕೇಶವಿವರ್ಧನಮ್ ಅಂತ ಹೇಳ್‌ವೆ. ಇದರ ಹೂವು, ಎಲೆ, ಬೇರ್, ಕೆತ್ತೆ ಎಲ್ಲಾ ಮೊದ್ದಿಗೆ ಬಳ್‌ಸುವೆ. ಮೊದ್ದ್‌ಗೆ ಬಿಳಿ ದಾಸಾಳ ಶ್ರೇಷ್ಠಂತಾ ಆಯುರ್ವೇದ ಪಂಡಿತರ್ ಹೇಳ್‌ವೆ. ಎಲ್ಲಾ ನಮೂನೆ ದಾಸಾಳ ಹೂವುಗಳು ಮೊದ್ದ್‌ಗೆ ಆದವೆ.

ದಾಸಾಳ ಹೂವು ಬಾಳ ಪೊರ್ಲುನ ಹೂವು. ದೆಯಿಲಿ ದಿನಾ ಅರ್ಳಿ ನೋಡೊವ್ಕೆ ಕುಸಿ ಕೊಟ್ಟದೆ. ತೋಟದ ಬೇಲಿಲಿ ಅಂಗಳದ ಪುಡೆಲಿ, ಹೂವುನ ಚಟ್ಟಿಲಿ ಎಲ್ಲಿ ನೆಟ್ಟರೂ, ಯಾವ ಮಣ್ಣ್‌ಲಿಯೂ, ಸೊಂಪಾಗಿ ಬೆಳ್‌ದದೆ. ನೀರ್ ಬೇಡ, ವರ್ಷ ಪೂರ್ತಿ ಹೂವು ಬುಡ್‌ದರ್‌ಂದ ದಾಸಾಳ ಇರುವಲ್ಲಿ ಮನೆ ಇಜ್ಜೆಲ್‌ಗೆ ಒಂದು ಸೊಬಗ್ ಇದ್ದದೆ.

**ದಾಸಾಳದ ಮನೆ ಮೊದ್ದು :-** ಐದ್ ದಾಸಾಳ ಹೂವು ಅಲ್ಲರೆ ಐದ್ ಎಲೆನ ಮೂರ್ ನಿಮ್ಸ್ ನೀರ್‌ಲಿ ಕೊದ್‌ಸಿ ಪ್ರತಿ ದಿನ ಬೊಳ್ಪುಗೆ ಹಿಂಬೊತ್ತು 21 ದಿನ ತಕಂಡರೆ ಕಬ್ಬಿಣ ಸತ್ವ ಹೆಚ್ಚಾದೆ. ಸರೀರದ ಬೇನೆ ಕಮ್ಮಿ ಆದೆ. ಕೆಂಪು ದಾಸಾಳ ಹೂನ ಕಷಾಯ ಮಾಡಿ ತಕಂಡರೆ ಹೆಣ್ಣ್ ಮಕ್ಕಳ ಮುಟ್ಟಿನ ದಿನಗಳ ಹೊಟ್ಟೆ ಬೇನೆ ಕಮ್ಮಿ ಆದೆ. ದಾಸಾಳ ಹೂವುನ ಅರ್‌ದ್ ಜೇನ್ ಸೇರ್‌ಸಿ ಹಂಞ ದಿನ ತಕಂಡರೆ ಮೊನ್ಸ್‌ನ ವಿಕಾರಗ, ಭ್ರಮೆ, ಉನ್ಮಾದ ಮೆದ್‌ಳಿನ ದೌರ್ಬಲ್ಯಗ ಕಮ್ಮಿ ಆದೆ. ಬಿದ್ದ್ ಗಾಯ ಆಕನ ಕತ್ತಿ ಏಟ್‌ಬಿದ್ದ್ ನೆತ್ತರ್ ಹೋಗ್‌ತ್ತಿದ್ದರೆ ದಾಸಾಳದ ಹೂವುನ ರಸ ಪೂಜಿರೆ ಆಗಲೇ ರಕ್ತ ಹೋದು ನಿತ್ತ್ ಗಾಯನೂ ಬೇಗ ಗುಣ ಆದೆ. ದಾಸಾಳದ ಎಲೆಗಳ ಗುದ್ದಿ ರಸ ತೆಗ್‌ದ್ ನಿಂಬುಳಿ ರಸ ಸೇರ್‌ಸಿ ತಲೆ ಕೂದಲ್‌ಗೆ ಹಾಕಿ 2 ಗಂಟೆ ಮೇಲೆ ತಲೆ ಕೂದಲ್ ತೊಳ್‌ದರೆ ಕೂದಲ್ ಉದುರುದು ಕಮ್ಮಿ ಆದೆ. ಕೂದಲ್ ಕಪ್ಪಾಗಿ, ದಪ್ಪಾಗಿ ಬಂದದೆ. ಕೂದಲ್‌ಗೆ ಕೃತಕ ರಾಸಾಯನಿಕ ಮಿಶ್ರಣ ಶಾಂಪೂ ಬಳ್‌ಸದೆ ದಾಸಾಳ ಸೊಪ್ಪುನ ರಸನೇ ಬಳ್‌ಸಿರೆ ಕೂದಲ್ ಬೇಗ "ಬಿಳಿಯು ಆಕಿಲ್ಲೆ, ಬಾಲ ನೆರೆಯೂ ಬಾಕಿಲ್ಲೆ."

ದಾಸಾಳನ ಒಂದು ಅಳ್‌ತೆಗೆ 250 ಗ್ರಾಂ ಹೂವು, ಎಲೆ 250 ಗ್ರಾಂನಷ್ಟ್ ನೀರ್ ಹಾಕಿ ಮಿಕ್ಸಿಲಿ ಮಿಕ್ಸಿ ಮಾಡಿ ರಸ ತೆಗ್‌ದ್ 1/2 ಲೀಟರ್ ಎಳ್ಳೆಣ್ಣೆ, ಅಲ್ಲರೆ ತೆಂಗಿನೆಣ್ಣೆಲಿ ಹಾಕಿ ನೀರ್‌ನ ಅಂಶ ಹೋಗುವವರೆಗೆ ಕೊದ್‌ಸಿ ತಣ್‌ಸಿದ ಮೇಲೆ ಈ ಎಣ್ಣೆನ ಕುಪ್ಪಿಲಿ ತುಂಬಿಸಿಟ್ಟ್ ತಲೆಗೆ ಹಾಕ್‌ತ್ತಿದ್ದರೆ ಕೂದಲ್ ಉದುರುದು, ತಲೆಲಿ ಬರುವ ಹೊಟ್ಟು ಬೇಗ ಬಿಳಿ ಆದರ್‌ನ್ನ ತಪ್ಪ್‌ಸಕ್. ಅರ್ಗ್ಗಾಲಲಿ, ಉಷ್ಣಕ್ಕೆ ಬೆಗರ್‌ಗೆ ಆವ ಕಜ್ಜಿ, ಕುರುಗಳಿಗೆ ದಾಸಾಳ ಹೂವುನ ತಕಂಡರೆ ಒಳ್ಳೇ ಮನೆ ಮೊದ್ದು. ದಾಸಾಳ ಹೂವುನ ತುಪ್ಪಲಿ ಹುರ್‌ದ್, ಕಲ್ಲ್ ಸಕ್ಕರೆ ಸೇರ್‌ಸಿ ಬೊಳ್ಪುಗೆ, ಹಿಂಬೊತ್ತು, ಒಂದೊಂದು ಸೌಟು ತಿಂದ್ ಹಾಲ್ ಕುಡ್ದರೆ ಉರಿ ಮೂತ್ರ, ಮೂತ್ರ ತಡೆ, ಗರ್ಭಾಶಯದ ತೊಂದರೆ ಕಮ್ಮಿ ಆದೆ.

ಅರ್ಗ್ಗಾಲಲಿ ಹೂವುನ ಒಣ್‌ಂಗಿಸಿ ಹುಡಿ ಮಾಡಿ ಇಸಿಕಂಡ್ ಹಾಲ್‌ಲೀ ಇಲ್ಲರೆ ನೀರ್‌ಲೀ ಕಲ್‌ಸಿ ಮೋರೆಗೆ ಹಾಕಿರೆ ಒಳ್ಳೇ ಬಣ್ಣ ಬಂದದೆ. ಇದ್ರಂದಾ ಮೋರೆನ ಕಲೆಗ ಮಾಯಾಗಿ ಚೋಲಿಗೆ ಒಳ್ಳೇ ಹೊಳ್‌ಪ್ ಬಂದದೆ. ಮೊಗ್ಗುಗಳನ್ನ ಒಣ್‌ಂಗಿಸಿ ಹೊಡಿ ಮಾಡಿ ಬಿಸಿ ಹಾಲ್‌ಲಿ ಹಾಕಿ ಕಲ್‌ಸಿ ಕುಡ್‌ದರೆ ರಕ್ತಹೀನತೆ, ಶಕ್ತಿಗೆ ಒಳ್ಳದ್. ಇದರೊಟ್ಟಿಗೆ ಎಲೆಗಳನ್ನ ಒಣ್‌ಂಗಿಸಿ ಸೇರ್‌ಸಿರೆ ನೆನಪಿನ ಶಕ್ತಿ ಹೆಚ್ಚಾದೆ. ಎಲೆಗಳ ಪೇಸ್ಟ್ ಪೂಜಿರೆ ಮೈಚೋಲಿಗೆ ಒಳ್ಳದ್. ಬೇವಿನ ಹೂವು

ಸೇರ್‌ಸಿ ತಕಂಡರೆ ಹೊಟ್ಟೆಲಿರುವ ಹುಳ ಸತ್ತದೆ. ಮಲ್ಲಿಗೆ ಹೂ ಸೇರ್‌ಸಿ ಅರ್‌ದ್ ಪೂಜಿರೆ ಸೋರಿಯಾಸಿಸ್ ಗುಣ ಆದೆ.

## ದಾಸಾಳಂದ ಮಾಡ್ವ ತಿನ್‌ಸ್‌ಗ:-

ದಾಸಾಳಂದ ದೋಸೆ, ಇಡ್ಲಿ, ಗೊಜ್ಜು, ಚಟ್ನಿ ಹೊಡಿ, ಇನ್ನೂ ಅವರವರ ಮೊನ್ಸ್‌ಗೆ ಬಂದ ರುಚಿಯಾದ ಹೆಚ್ಚ್‌ಚ್ಚ್ ತಿನ್ಸ್‌ಗಳ ಮಾಡಕ್. ತಾಜಾ ಹೂವುನ ಚಿಗುರೆಲೆನ ಅಕ್ಕಿ ಒಟ್ಟಿಗೆ ಅರ್‌ದ್ (ಮಿಕ್ಸಿ ಮಾಡಿ) ದೋಸೆ, ಇಡ್ಲಿ ಮಾಡಕ್. ಹೆಚ್ಚಿನವುಕೆ ಇದ್ ಗೊತ್ತಿರುವ ಸಂಗತಿ. ಹೂವುನ ಒಣ್‌ಂಗಿಸಿ, ಹೊಡಿ ಮಾಡಿ ಅದಕ್ಕೆ ಹಾಲ್, ಸಕ್ಕರೆ ಸೇರ್‌ಸಿ ಕುದ್‌ಸಿರೆ ಆರೋಗ್ಯಕರ ಪೇಯ ಮಾಡಕ್. ಒಣ್‌ಂಗಿಸಿದ ದಾಸಾಳದ ಹೂನ ಹೊಡಿಗೆ ಒಳ್ಳೆ ಮೆಣ್‌ಸ್, ತೆಂಗಿನಕಾಯಿ, ಹುಳಿ, ಉಪ್ಪು ಸೇರ್‌ಸಿ ಮಿಕ್ಸಿಲಿ ಒಮ್ಮೆ ತಿರ್‌ಗಿಸಿ ಅಗ್ರಣೆ ಕೊಟ್ಟರೆ ಅರ್ರಾಲಲಿ ಉಂಬಕೆ ರುಚಿಯಾದ ತಂಬುಳಿ ಆದೆ. ಇದೇ ತರಲೀ ಗೋಟು ಕಾಯಿ, ಕುಮ್ಮೆ ಮೆಣ್‌ಸ್ ಸೇರ್‌ಸಿ ಚಟ್ನಿ ಹೊಡಿ ಮಾಡಕ್. ನೀರ್‌ಗೆ ತಾಜಾ ಕೆಂಪು ದಾಸಾಳ ಹೂವುನ ತುಂಡು ತುಂಡು ಮಾಡಿ ಉಪ್ಪು ಹುಳಿ, ಬೆಲ್ಲ, ಹಸಿಮೆಣ್‌ಸ್ ಹಾಕಿ 2 ನಿಮಿಷ ಕೊದ್‌ಸಿ ಒಗ್ಗರಣೆ ಸೊಪ್ಪ್‌ನ ಒಗ್ಗರಣೆ ಹಾಕಿರೆ ಉಂಬಕೆ ಲಾಯಿಕ್‌ನ ಗೊಜ್ಜು ಆದೆ.

ಉಷ್ಣ ಪ್ರವೃತ್ತಿಯವುಕೆ ಸರೀರ ತಂಪಾಕೆ ಕಬ್ಬಿಣಾಂಶ ಕಡ್‌ಮೆ ಇರ್‌ವವಕೆ ಇದ್ ಒಳ್ಳದ್. ದಾಸಾಳದ ಹೂವು ಎಲೆ ಹಸ್, ಆಡ್, ಎಮ್ಮೆಗಳಿಗೆ ಸಹ ಇಷ್ಟಾದ ಆಹಾರ. ಹಸ್‌ಗಳಿಗೆ ದಾಸಾಳದ ಸೊಪ್ಪು ಅಕ್ಕಿ ಒಟ್ಟಿಗೆ ಸೇರ್‌ಸಿ ಮಡ್ಡಿ ಬೇಯಿಸಿ ಹಾಕಿರೆ ಸ್ವಲ್ಪ ಹೆಚ್ಚಿಗೆ ಹಾಲ್ ಸಿಕ್ಕಿದೆ.

ದಾಸಾಳದ ದೆಯಿ ಬೆಳ್‌ದ್ ಕೊಂಬೆಗಳಾಗಿ ಹೆಚ್ಚ್ ಕಮ್ಮಿ 15 ಅಡಿ 20 ಅಡಿ ಬೆಳ್‌ದದೆತ್ತೇಳಿ ಎಲ್ಲವೂಕ್ಕುನು ಗೊತ್ತಿರುವ ಸಂಗತಿ. ಅಂಕೋಲಾಲೀ ಅರುವತ್ ಅಡಿ ಎತ್ತರ ಬೆಳ್‌ದ್ ಜಾಗತಿಕ ದಾಖಲೆ ಆಗುಟುತ ಪತ್ರಿಕೆಲಿ ಓದ್ಯೊಳೆ.

## ಮನೆಮದ್ದ್–3

# ವೀಳ್ಯದೆಲೆ ಆರೋಗ್ಯಕ್ಕೆ ಹಲವು ಲಾಭ

ನಮ್ಮ ಹಳಬರ ಕಾಲದ ಮೊದ್ಲ್‌ಲಿ ವೀಳ್ಯದೆಲೆಗೆ ತುಂಬಾ ಬೆಲೆ ಉಟ್ಟು. ವೀಳ್ಯದೆಲೆನ ಭಾರತಲಿ ಪಾನ್‌ತ್ತೇಳುವ ಹೆಸರ್‌ಂದಲೇ ಕರೆಯಲಾಗುಟ್ಟು. ಪೈಪರೇಸಿಯ ಕುಟುಂಬಕ್ಕೆ ಸೇರ್‌ದ ಇದ್ ಬೊಳ್ಳಿ ಜಾತಿ ದೈಂತ ಎಲ್ಲವುಕೂನು ತಿಳಿದ ವಿಚಾರ ಕರಾವಳಿ ಕರ್ನಾಟಕಲಿ ಎಲ್ಲಾ ಜಂಬರಕ್ಕೆ ಎಲೆ ಅಡಿಕೆ ಬೇಕೆ ಬೇಕು. ಆಯುರ್ವೇದಲಿ ವೀಳ್ಯಕ್ಕೆ ಮುಕ್ಯ ಸ್ಥಾನ ಉಟ್ಟು. ಕೆಲವು ಕಾಯಿಲೆಗಳಿಗೆ ಇದರ ಮೊದ್ದಾಗಿ ಬಳ್‌ಸ್‌ವೆ.

ಒಂದು ವೀಳ್ಯದೆಲೆ ಹಂಞ್ಞಿ ಕರಿ ತೊಳ್ಸಿ ಮತ್ತೆ ಒಂದು ಲವಂಗನ ಅರ್‌ದ್ ಎರಡ್ ಮೂರು ಸಲ ತಕಂಡರೆ ಕೆಮ್ಮು ಕಮ್ಮಿ ಆದೆ.

ವೀಳ್ಯದೆಲೆನ ರಸ ಜೀರ್ಣಾಂಗಗಳನ್ನ ರಕ್ಷಿಸಿ ವಾಯುಪಕೋಪ ನಿವಾರಕ, ಸಾರಸಂಗಹಿ ಗುಣಗಳನ್ನ ಹೊಂದಿಟ್ಟು. ವೀಳ್ಯದೆಲೆನ ಅಗ್‌ದ್ ನುಂಗುದು ಆರೋಗ್ಯಕ್ಕೆ ವಳ್ಳದ್. ಅಜೀರ್ಣ ಸಹಿತ ಹಲವು ಜೀರ್ಣಕ್ರಿಯೆ ತೊಂದರೆಗ ಇದ್‌ರಿಂದ ಕಮ್ಮಿ ಆದೆ. ಎಲೆನ ಜಗ್‌ದ್ ನುಂಗುದರ್‌ಂದ ಬಾಯಿಲಿ ಹೆಚ್ಚಿನ ಲಾಲಾರಸ ಹುಟ್ಟಿದೆ.

ಸಣ್ಣ ಮಕ್ಕಳ್‌ಲಿ ಉಸಿರಾಟದ ತೊಂದರೆ ಆಕನ ಎಲೆಗೆ ಎಂಣೆ ಪೂಜಿ ಬಾಣಲೆಲಿ ಬೆಚ್ಚಗೆ ಬಾಡಿಸಿ ಎಲೆನ ಎದೆ ಮೇಲೆ ಇಸಿರೆ ವಳ್ಳದಾದೆ.

ವೀಳ್ಯದೆಲೆಲಿ ಆಂಟಿ ಆಕ್ಷಿಡೆಂಟ್‌ಗ ತುಂಬಾ ಉಟ್ಟು. ಇದ್ ಕೆದ್ರುವ ಗುಣನ ಕಡ್‌ಮೆ ಮಾಡಿ ಅದರ್‌ಂದ ಗಾಯಗಳನ್ನ ಬೇಗನೆ ಗುಣ ಮಾಡ್‌ದೆ. ಅಲ್ಲದೆ ಗಾಯಲಿ ನಷ್ಟ ಹೊಂದಿದ ಅಂಗಾಂಶಗಳನ್ನ ಮತ್ತೆ ತಿರ್‌ಗಿ ಜೋಡಿಸಿಕೆ ಇದ್‌ರ್‌ಲಿ ತುಂಬಾ ಪ್ರೊಟೀನ್‌ಗ ಸಹಾಯ ಮಾಡ್‌ದೆ. ಇದಕ್ಕಾಗಿ ಕೆಲವು ಎಲೆಗಳ ರಸ ತೆಗ್‌ದ್ ಗಾಯದ ಮೇಲೆ ಪೂಜೊಕು. ಮತ್ತೆ ಕೆಲವು ಎಲೆಗಳನ್ನ ಗಾಯದ ಮೇಲೆ ಸುತ್ತಿ ಇಸೊಕು. ಇದ್‌ರ್‌ಂದ ಗಾಯ ಒಂದೆರಡ್ ದಿನಲಿ ಹಣ್ಣಾದೆ. ಎರಡ್ ಕೊಂಡೆ ಕಾಯೆಣ್ಣೆಗೆ ಅರ್ಧಕೊಂಡೆ ವೀಳ್ಯದೆಲೆನ ರಸ ಅರ್ಧ ಕೊಂಡೆ

ತಿಮರೆ ರಸ ಸೇರ್ಸಿ ಲಾಯಿಕ್ ಕೊದ್ಸಿ ಕೂದಲಿಗೆ ದಿನೋಳು ತಿಕ್ಕಿರೆ ಕೂದಲ್ ಉದುರುದು ನಿತ್ತ್ ಕೂದಲ್ ಲಾಯಿಕ ಬಂದದೆ.

ವೀಳ್ಯದಲ್ಲಿನ ಬ್ಯಾಕ್ಟೀರಿಯಾ ನಿವಾರಕ ಗುಣ ಬಾಯಿಯ ಸ್ವಚ್ಛತೆನ ಕಾಪಾಡ್‌ದಕ್ಕೆ ಸಹಾಯ ಆದೆ. ವೀಳ್ಯದೆಲೆನ ಜಗ್‌ದ್ ನುಂಗ್‌ಕಾಕನ ಬಾಯಿಲಿ ಲಾಲಾರಸ ಹೆಚ್ಚಾದೆ. ಇದ್‌ರ್‌ಂದ ಬಾಯಿಲ್ಲಿರ್‌ವ ಪಿ.ಹೆಚ್. ಮಟ್ಟ ಕಡಿಮೆ ಆಗಿ ಇಳಿಕೆ ಆದೆ. ಹಿಂಗಾಗಿ ಬಾಯಿಯೊಳಗೆ ಬ್ಯಾಕ್ಟೀರಿಯಾಗಳ ಬೆಳವಣಿಗೆಯಾಗದಂಗೆ ತಡ್‌ದದೆ.

ವೀಳ್ಯದೆಲೆನ ಕಾವಲಿ ಮೇಲೆ ಬೆಚ್ಚಗೆ ಮಾಡಿ ಅದ್‌ಕೆ ಕರ್ಪೂರ ಸೇರ್‌ಸಿದ ಕಾಯೆಣ್ಣೆನ ಪೂಜಿ ಹಣೆಗೆ ಸಾಖ ಕೊಟ್ಟರೆ ತಲೆ ಬೇನೆ ಕಡ್‌ಮೆ ಆದೆ.

ಹಂಞ ವೀಳ್ಯದೆಲೆನ ಗುದ್ದಿ ಒಂದು ಬಿಳಿ ಅರ್‌ವೆಲಿ ಹಿಂಡಿ ರಸ ತೆಗ್‌ದ್ ಇದ್‌ಕೆ ಹಂಞ ಜೇನ್ ಸೇರ್‌ಸಿ ಸುಟ್ಟ ಗಾಯಕ್ಕೆ ಹಾಕಿ ಒಣ್‌ಗ್‌ಕೆ ಬುಡಿ. ಒಣಗಿದ ಮೇಲೆಯೂ ಇನ್ನಷ್ಟ್ ರಸ ಹಾಕಿ ಹಿಂಗೆನೆ ತುಂಬಾ ಸಲ ಹಾಕ್‌ತ್ತಾ ಇದ್ದರೆ ಸುಟ್ಟ ಚೋಲಿನ ಕೆಳಗೆ ಹೊಸ ಚೋಲಿ ಬಾಕೆ ಸುರು ಆದೆ. ಒಂದ್ ಕಪ್ ನೀರ್‌ನ ಕೊದ್‌ಸಿ ಒಲೆಂದ ಇಳ್‌ಸಿದ ಮೇಲೆ 5,6 ಚಿಗ್‌ರ್ ವಿಳ್ಯೆದೆಲೆಗಳನ್ನ ಹಾಕಿ ತಣಿಯಕೆ ಬುಡಿ. ಈ ನೀರ್‌ನ ಸೋಸಿ (ಅರ್ಪಿ) ದಿನಕ್ಕೆ ಮೂರು ಸಲ ಕಣ್ಣ್‌ಗಳನ್ನ ತೊಳ್‌ದರೆ ಕಣ್ಣ್‌ನ ಉರಿ ಕಮ್ಮಿ ಆದೆ. ಪೂರ್ಣ ಉರಿ ಕಡ್‌ಮೆ ಆಗುವವರೆಗೂ ಈ ವಿಧಾನನ ಮಾಡಕು.

ಮೈ ಕೈ ತೊರ್ರುದಕೆ ಸುಮಾರ್ ಒಂದು ಲೀಟರ್ ನೀರ್‌ಗೆ ಇಪ್ಪತ್ತು, ಇಪ್ಪತ್ತೈದ್ ವಿಳ್ಯದೆಲೆಗಳನ್ನ ಹಾಕಿ ಕೊದ್‌ಸಿ ತಣ್‌ಸಿ ತಣ್‌ದ ನೀರ್‌ಂದ ಎಲೆಗಳನ್ನ ಅರ್ಪಿ ತೆಗ್‌ದ್ ಈ ನೀರ್‌ಂದ ತೊರ್ರುವ ಜಾಗನ ಲಾಯಿಕ ತೊಳ್‌ದ್ ಈ ನೀರ್‌ಲಿ ಅದ್ದಿದ ಸ್ಪಾಂಜ್‌ಲಿ ಒರ್‌ಸಿರೆ ವಳ್ಳದ್. ಒಂದೆರಡ್ ದಿನಲ್ಲಿಯೆ ತೊರ್ರುದು ಕಮ್ಮಿ ಆದೆ.

✍ಬಿ. ಯಶೋದ ರಾಘವ

## ಹೊಸ ರುಚಿ

### 1. ಮರುವಾಯಿ ಸುಕ್ಕ

**ಬೇಕಾಗುವ ಸಾಮಾನ್** : 100 ದೊಡ್ಡ ಮರುವಾಯಿ, 1 ತೆಂಗಿನಕಾಯಿ ಹೆರ್‍ದ್‍ದ್, ರುಚಿಗೆ ಉಪ್ಪು.

**ಒಗ್ಗರಣೆಗೆ** : 3 ಚಂಚೆ ಎಣ್ಣೆ, ಅರ್ಧ ಚಂಚೆ ಸಾಸ್ವೆ, 1 ದೊಡ್ಡ ನೀರುಳ್ಳಿ, 1 ಗೆಂಡೆ ಬೆಳ್ಳುಳ್ಳಿ, ಬೇವ್ನ ಸೊಪ್ಪು.

**ಮಸಾಲೆ** : ಮನೆಲಿ ಹೊರ್‍ದ್ ಹೊಡಿ ಮಾಡ್ದ ಮೆಣ್ಸ್, ಕೊತ್ತಂಬ್ರಿ, ಜೀರಿಗೆ ಹೊಡಿ, ಚೂರು ಹುಳಿ, ಹೊಡಿ, ಅರ್ಸಿನ.

ಮರುವಾಯಿನ ಸುರುಗೆ ನೀರ್‌ಲಿ ಲಾಯಿಕ್ ತೊಳ್ದ್. ಅದ್‌ಕೆ ಬಿಸಿನೀರ್ ಹಾಕೊಕು. ಆಗ ಮರುವಾಯಿ ಸತ್ತ್‌ದ್ ಬಾಯಿ ಬುಟ್ಟದೆ. ಈಗ ಅದರ ಹಜಿರ್ ಮಾಡಿಕೆ ಸುಲಭ ಆದೆ.

**ಮಾಡುವ ರೀತಿ** : ಬಾಣಲೆನ ತಕಂಡ್ ಅದರ್‌ಲಿ ಒಗ್ಗರಣೆಗೆ ಎಣ್ಣೆ ಕಾಯಕೆ ಇಸೊಕು. ಎಣ್ಣೆ ಕಾದ ಮೇಲೆ ಅದ್‌ಕೆ ಸಾಸ್ವೆ, ತುಂಡು ಮಾಡ್ದ ನೀರುಳ್ಳಿ, ಗುದ್ದಿದ ಬೆಳ್ಳುಳ್ಳಿ, ಬೇವ್ನ ಸೊಪ್ಪು ಹಾಕೊಕು. ಆಮೇಲೆ ಹಜಿರ್ ಮಾಡ್ದ ಮರುವಾಯಿನ ಹಾಕೊಕು. ಮತ್ತೆ ಅದ್‌ಕೆ ರುಚಿಗೆ ಬೇಕಾದಷ್ಟ್ ಉಪ್ಪು, ಹುಳಿ ಮತ್ತು ಖಾರ, ಅರ್ಸಿನ ಹೊಡಿ ಹಾಕಿ ಸ್ವಲ್ಪ ನೀರ್ ಹಾಕೊಕು. ಅದ್ ಬೇಯ್‌ಕನ ನೀರ್ ಬುಟ್ಟದೆ. ನೀರ್ ಆರಿಕೆಂಡ್ ಬಾಕನ ಕಾಯಿಹೂನ ಲಾಯಿಕ್ ಹೊರ್‍ದ್ ಅದ್‌ಕೆ ಸೇರ್‌ಸೊಕು. ಈಗ ರುಚಿಯಾದ ಮರುವಾಯಿ ಸುಕ್ಕ ರೆಡಿ.

**ನಮ್ಮ ಆರೋಗ್ಯಕ್ಕೆ ಬೇಕಾದ ಕ್ಯಾಲ್ಸಿಯಂ ಧಾರಾಳವಾಗಿ ಮರುವಾಯಿಲಿ ಸಿಕ್ಕಿದೆ.**

* * * * *

### 2. ಅಳ್‌ಂಬು ಕಾಯಿಹಾಲ್ ಆಂಬ್ರ :

**ಬೇಕಾಗುವ ಸಾಮಾನ್** : ಅಳ್‌ಂಬು, 1 ದೊಡ್ಡ ಕಾಯಿ ಹೆರ್‍ದ್‍ದ್, ರುಚಿಗೆ ಉಪ್ಪು.

**ಒಗ್ಗರಣೆಗೆ** : 2 ಚಂಚೆ ಕಾಯೆಣ್ಣೆ, ಅರ್ಧ ಚಂಚೆ ಸಾಸ್ವೆ, 1 ನೀರುಳ್ಳಿ, 6 ಎಸಳ್ ಬೆಳ್ಳುಳ್ಳಿ, ಸ್ವಲ್ಪ ಬೇವ್ನ ಸೊಪ್ಪು, ಹುಳಿಮೆಣ್ಸ್‌ಗೆ : 10 ಊರ್ ಮೆಣ್ಸ್, 15 ಕುಂಟೆ ಮೆಣ್ಸ್, 2 ಚಂಚೆ ಕೊತ್ತಂಬ್ರಿ, 1 ಚಂಚೆ ಜೀರಿಗೆ, 1 ಸಣ್ಣ ನೀರುಳ್ಳಿ, 4 ಎಸಳ್ ಬೆಳ್ಳುಳ್ಳಿ, ಹುಣ್ಸೆಹುಳಿ, ಚೂರು ಅರ್ಸಿನ.

**ಕಾಯಿ ಹಾಲಿಗೆ** : ಕಾಯಿ ಹೂ, 2 ಎಸಳ್ ಬೆಳ್ಳುಳ್ಳಿ ಮತ್ತು ಹನಿಸ್ ಜೀರಿಗೆ ಸೇರ್ಸಿ ಸಣ್ಣ ಕಡ್ಡ್‌ದ್ ಹಾಲ್ ಹಿಂಡಿ ಇಸಿಕಣೊಕು.

**ಮಾಡುವ ರೀತಿ :** ಅಳ್‌ಂಬುನ ಲಾಯಿಕ್ ಹಜಿರ್ ಮಾಡಿ ಹನಿಸ್ ಉಪ್ಪು ಮತ್ತು ಅರ್ಸಿನ ಹಾಕಿ ಬೇಸಿ, ಕೆಂಪು ಕಾಸಿ ಅದ್‌ಕೆ ಹಾಕಿಕಣೊಕು. ಒಂದು ಅಳಗೆ ತಕೆಂಡ್ ಅದ್‌ಕೆ ಒಗ್ಗರಣೆಗೆ ಬೇಕಾದ ಎಣ್ಣೆನ ಇಸೊಕು. ಎಣ್ಣೆ ಕಾದ ಮೇಲೆ ಅದ್‌ಕೆ ಸಾಸ್ವೆ, ಗುದ್ದಿದ ಬೆಳ್ಳುಳ್ಳಿ, ತುಂಡು ಮಾಡ್ದ ನೀರುಳ್ಳಿ, ಬೇವ್ನ ಸೊಪ್ಪು ಎಲ್ಲ ಒಂದೊಂದೆ ಹಾಕೊಕು. ಒಗ್ಗರಣೆ ಕಾದ ಮೇಲೆ ಅದ್‌ಕೆ ಬೇಸಿದ ಅಳ್‌ಂಬುನ ಹಾಕೊಕು. ಅದ್ ಸಣ್ಣ ಕೊದಿ ಬಾಕನ ಕಡ್ದ್ ಇಸಿದ ಹುಳಿ ಮೆಣ್ಸ್‌ನ ಹಾಕೊಕು. ಅದ್ ಲಾಯಿಕ್ ಕೊದ್ದ ಮೇಲೆ ಅದ್‌ಕೆ ತೆಗ್ದ್ ಇಸಿದ ಕಾಯಿ ಹಾಲ್‌ನ ಹಾಕೊಕು. ಈಗ ಅದ್ ಒಳ್ಳೆ ಕುದಿ ಬಾಕನ ಇಳ್ಸಿರೆ ಆತ್. ರುಚಿ ಆದ ಅಳ್‌ಂಬು ಕಾಯಿಹಾಲ್ ಅಂಬ್ರ ರೆಡಿ. ಕಾಯಿ ಹಾಲ್ ಮಂದ ಇದ್ದಷ್ಟ್ ಸಾರ್‌ನ ರುಚಿ ಜಾಸ್ತಿ. ಇದೇ ವಿಧಾನಲಿ ಕೋಳಿನ ಕೂಡ ಕಾಯಿಹಾಲ್ ಅಂಬ್ರ ಮಾಡಕ್. ಅಳ್‌ಂಬ್‌ನ ಬದ್‌ಲಿಗೆ ಕೋಳಿನ ಸೇರ್ಸಿರೆ ಆತ್.

**ನೀರ್ ದೋಸೆ ಮತ್ತೆ ಬೊಡ್‌ರೊಟ್ಟಿನೊಟ್ಟಿಗೆ ತಿಂಬಕೆ ಬಾರಿ ಲಾಯಿಕಾದೆ.**

* * * * *

## 3. ಅಮೃತ ಫಲ :

**ಬೇಕಾಗುವ ಸಾಮಾನು :** 1 ಗ್ಲಾಸ್ ದನದ ಮಂದ ಹಾಲ್, 2 ಗ್ಲಾಸ್ ಮಂದ ಕಾಯಿಹಾಲ್, ಒಂದೂವರೆ ಗ್ಲಾಸ್ ಸಕ್ಕರೆ, ಹನಿಸ್ ಏಲಕ್ಕಿ.

**ಮಾಡುವ ರೀತಿ :** ಒಂದು ದಪ್ಪ ತಳದ ಬಾಣಲೆ ತಕಂಡ್ ಅದ್‌ಕೆ ದನದ ಹಾಲ್, ಕಾಯಿಹಾಲ್ ಮತ್ತು ಸಕ್ಕರೆ ಸೇರ್ಸಿ, ಮಗಚಿಕೊಂಡ್ ಇರೊಕು. ಇದ್‌ಕೆ ತುಪ್ಪ ಬೇಕು ಅಂತ ಇಲ್ಲೆ. ಕಾಯಿಹಾಲ್ ಹಾಕಿದ ಕಾರಣ ಅದ್ ಕೊದಿಯಕನ ಎಣ್ಣೆ ಬುಟ್ಟದೆ. ಅದ್ ಕಾದ್‌ಕಂಡ್ ಬಾಕನ ತಿಳಿ ಕಂದು ಬಣ್ಣಕ್ಕೆ ಬಂದದೆ, ಈಗ ಹೊಡಿ ಮಾಡಿ ಇಸಿದ ಏಲಕ್ಕಿನ ಹಾಕೊಕು. ಹಂಗೆನೆ ಬಾಣಲೆಂದ ಬುಟ್ಟದೆ. ಈಗ ತುಪ್ಪ ಪೂಜಿದ ಬಟ್ಲ್‌ಗೆ ಅದರ ಹಾಕೊಕು. ಸ್ವಲ್ಪ ತಣ್ಣಂಗೆ ಆಕನ ತುಂಡು ಮಾಡೊಕು. ನೀರ್ ಪಸೆ ಇಲ್ಲದ ಡಬ್ಬಿಗೆ ಹಾಕಿ ಇಸಿರೆ 15 ದಿನಕ್ಕೆ ಏನೂ ಆದುಲೆ.

**✍ತುಳಸಿ ದಯಪ್ರಸಾದ್**

ಚಿತ್ರ ಕವನ

# ನೆನಪಾತ್ ತೌರೂರು



ಈ ಚಿತ್ರ ನೋಡ್‌ಕನ ನೆನಪಾತ್ ತೌರೂರು
ಲಾಯ್ಕಾಗಿ ಕಾಂಬೊದು ನೀವ್ಗೆ ನಮ್ಮೂರು

ನಡುಲಿ ಹೊಳೆ; ಅತ್ತಿತ್ತ ಹಳ್ಳಿ ಹಲವೂರು
ಜೋಡಿಸಿದ ಈ ಸೇತ್ವೆ ಊರಿಗಾಧಾರ.

ಸರ್ವರಿಗೆ ಸಂಪರ್ಕ ವಾಣಿಜ್ಯ ವ್ಯವಹಾರ
ಸರ್ವಾಭಿವೃದ್ಧಿಗೂ ಸೇತುವೆ ಆಧಾರ

ಇಲ್ಲಿರ್ದು ಜೀವನದಿ ಮತ್ಸಲೋಕದ ತೀರ್ಥ
ಎಲ್ಲಾ ಪಾಪವು ನೀಗಿ, ಆಗುವೊ ಪುಣ್ಯ ಪುನೀತ

ಫಲ-ಪುಷ್ಪ, ಪಶು-ಪಕ್ಷಿ ಕಾಡೊಳಗೆ
ಹಾಲ್ ಜೇನೇ ಹರಿದಿಲ್ಲಿ ಪಯಸ್ವಿನಿಯ ಒಳಗೆ

ಗುಡ್ಡಗಾಡ್‌ನ ಗಿಡ ಮೂಲಿಕೆನ ಚಿಗುರು
ಗೆಂಡೆ ಗೆಣಸ್ನ ಬೇರ್ ರಸ ಧಾರೆ ನೀರು

ಆಯುರಾರೋಗ್ಯದ ಆಯುರ್ವೇದೌಷಧ
ಪಯಸ್ವಿನಿ ನದಿ ನೀರ್ ದಿವ್ಯೌಷಧ

ಮರಗಿಡಗ ಎಲ್ಲದರ ರಕ್ಷಣೆಯನೆಂದೂ
ಅರಣ್ಯ ಕಾಯ್ದಿರಿಸಿತ್ತ್ ಸರ್ಕಾರ ಅಂದೂ

ಅತಿಕ್ರಮಣ ಮಾಡಿರೆ; ದೆವ್ವ - ದೇವರ ಶಾಪ
ಅತಿವೃಷ್ಟಿ - ಅನಾವೃಷ್ಟಿ ಬರಗಾಲದ ತಾಪ

ದೇವ್ರ ಹೆಸ್ರಲಿ ಬನ; ಪ್ರಕೃತಿ ದೇವಿಯ ವನ
ದೇವ್ರಾಂಗೆ ಪೂಜಿಸಿದೊ ಅಲ್ಲಿಯ ಜನ

✍ಎಂ. ಸಿ. ಗೀತಾ

# ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ

2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ

3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ

4 ಕುಂಕುಮ : ಪೂಜಾರೀರ ಜಿ. ಮಾದಪ್ಪ

5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು

6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ

7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ

8 ತೋರಣ : ಬಾರಿಯಂಡ ಆರ್. ಜೋಯಪ್ಪ

9 ಬೊಲ್ಪು : ಲೋಕೇಶ್ ಕುಂಚಡ್ಕ

10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ

11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ

12 ಹೊಸ ಬೊದ್ಕ್ : ಉದಯಕುಮಾರಿ, ಚೆಂಬು.

13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ

14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ

15 ಅನುಭವಧಾರೆ : ಹೊದ್ದೆಟ್ಟಿ ಭವಾನಿಶಂಕರ

16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.

17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.

# ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿದ್ ಅಧ್ಯಕ್ಷರ್ ಮತ್ತೆ ಸದಸ್ಯರ ವಿವರ

**ಶ್ರೀ ಪಿ.ಸಿ.ಜಯರಾಮ**
ಅಧ್ಯಕ್ಷರ್
ಬಿನ್॥ ಚಿನ್ನಪ್ಪಗೌಡ
ಪಾಲ್ತಾಡು ಮನೆ, ಮಡಪಾಡಿ ಅಂಚೆ ಮತ್ತು ಗ್ರಾಮ, ಸುಳ್ಯ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ
ಮೊ. ನಂ 9448625224, 9448528924.

**ಶ್ರೀ ಚಂದ್ರಹಾಸ ರೈ ಬಿ.**
ರಿಜಿಸ್ಟ್ರಾರ್
ಕರ್ನಾಟಕ ಅರೆಭಾಷೆ ಸಾಹಿತ್ಯ
ಮತ್ತು ಸಂಸ್ಕೃತಿ ಅಕಾಡೆಮಿ,
ಮಡಿಕೇರಿ.

**ಶ್ರೀಮತಿ ಕೆ.ಟಿ.ದರ್ಶನ್**
ಅರ್ಥ ಸದಸ್ಯರು ಮತ್ತು
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ
ಮೊ.ನಂ 9483110593

<u>ಸದಸ್ಯರ್</u>

1. **ಶ್ರೀ ಮಾಧವ ಗೌಡ**
ಕಾಮಧೇನು, ಬೆಳ್ಳಾರೆ, ಸುಳ್ಯ ತಾಲ್ಲೂಕು
ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9448462163

2. **ಶ್ರೀಮತಿ ತಿರುಮಲೇಶ್ವರಿ**
ಕೋಂ: ಲಕ್ಷ್ಮಣ ಗೌಡ
ಅಬರಡ್ಕ ಮನೆ, ಜಾಲ್ಸೂರೂ ಅಂಚೆ
ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9901430797

3. **ಶ್ರೀ ಚಿದಾನಂದ ಬೈಲಾಡಿ**
ಬಿನ್ ಬಾಬುಗೌಡ
ವಕೀಲರು, ಪುತ್ತೂರು ಸೆಂಟರ್
ಪುತ್ತೂರು 574201
ಮೊ. ನಂ. 9901430797

4. **ಶ್ರೀ ಯತೀಶ್ ಕುಮಾರ್ ಗೌಡ**
ಬಿನ್:ಮೋನಪ್ಪಗೌಡ
ಸಂಪ್ಯಾಡಿ ಮನೆ
ರಾಮಕುಂಜ ಅಂಚೆ ಮತ್ತು ಗ್ರಾಮ,
ಪುತ್ತೂರು ತಾಲ್ಲೂಕು ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9686914166

5. **ಶ್ರೀ ಪರಶುರಾಮ ಚಿಲ್ತಡ್ಕ**
ಬಿನ್ ಚಿನ್ನಪ್ಪಗೌಡ
ಚಿಲ್ಲತ್ತಡ್ಕ ಮನೆ
ನಡಗಲ್ಲು ಅಂಚೆ,ನಾಲ್ಕೂರು ಗ್ರಾಮ
ಸುಳ್ಯ ತಾಲ್ಲೂಕು ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9481959171

6. **ಶ್ರೀ ಕೆ.ಟಿ.ವಿಶ್ವನಾಥ್**
ಬಿನ್ ತಿಮ್ಮಪ್ಪಗೌಡ
ಕೈಕುಡಿ ಮನೆ, ಸುಳ್ಯ ತಾಲ್ಲೂಕು
ದಕ್ಷಿಣ ಕನ್ನಡ ಜಿಲ್ಲೆ
ಮೊ. ನಂ. 9448464593

7. **ಶ್ರೀ ದೇವರಾಜ್ ಬಿ.ಡಿ**
ಬಿನ್ ದಾಮೋದರ
ಬೇಕಳ ಮನೆ, ಕರಿಕೆ ಗ್ರಾಮ, ಮಡಿಕೇರಿ
ಮೊ ನಂ. 9448869861

8. **ಶ್ರೀ ಬಾರಿಯಂಡ ಜೋಯಪ್ಪ**
ಬಾರಿಯಂಡ ಮನೆ
ಮದೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲ್ಲೂಕು
ಮೊ ನಂ. 9481770584

9. ಶ್ರೀಮತಿ ಕಡ್ಲೇರ ತುಳಸಿ ಮೋಹನ್
ಬೆಟ್ಟಗೇರಿ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು
ಮೊ ನಂ, 9483110940

10 ಶ್ರೀಮತಿ ಶ್ವೇತಾ ಮಡಪ್ಪಾಡಿ
ಅಂಚೆ ವಿಳಾಸ:
ಮನೆ ನಂ 19/20ಎ, 6ನೇ ಮುಖ್ಯ ರಸ್ತೆ
7ನೆ ಅಡ್ಡರಸ್ತೆ, ಸರಸ್ವತಿ ಪುರಂ, ಮೈಸೂರು-09
ಮೊ ನಂ. 7019188932

11. ಶ್ರೀ ಎ. ಕೆ. ಹಿಮಕರ
ಗುತ್ತಿಗಾರು ಅಂಚೆ
ಸುಳ್ಯ ತಾಲ್ಲೂಕು ದ.ಕ 574218
ಮೊ ನಂ 9481267121

12. ಶ್ರೀ ಪ್ರಸನ್ನ ಕೆ.ಟಿ
ಬಿನ್: ತಿಮ್ಮಯ್ಯ ಕೆ.ಎ
"ಕಾಫಿಕಳ ಎಸ್ಟೇಟ್ "
ಮಕ್ಕಂದೂರು ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು,ಕೊಡಗು ಜಿಲ್ಲೆ
ಮೊ ನಂ 9480022923

13. ಶ್ರೀ ಕೆ.ಎ.ಮೊಣ್ಣಪ್ಪ
ಬಿನ್: ಅಪ್ಪಚ್ಚ ಕೆ.ಎ
ಬ್ಲಾಕ್ ನಂ 09,"ಕೌಸ್ತುಭ ನಿಲಯ"
ಹೋಟೆಲ್ ಕೂರ್ಗ್ ಇಂಟರ್ ನ್ಯಾಷನಲ್ ಹಿಂಭಾಗ,
ಕಾನ್ವೆಂಟ್ ರಸ್ತೆ ಮಡಿಕೇರಿ.
ಮೊ ನಂ 9844187261

14. ಶ್ರೀ ಸುರೇಶ್ ಎಂ.ಹೆಚ್
ಬಿನ್: ಹುಕ್ರಪ್ಪ ಗೌಡ
ಅಮೈ, ಮಡಪ್ಪಾಡಿ, ಉಬರಡ್ಕ
ಮಿತ್ತೂರು ಗ್ರಾಮ, ಸುಳ್ಯ
ಮೊ ನಂ 9449387181

15. ಶ್ರೀ ದಯಾನಂದ ಆಲಿಯಾಸ್
ದಿನೇಶ್ ಹಾಲೆಮಜಲು
ಬಿನ್: ಯು.ಡಿ.ಮಂಜುನಾಥ ಗೌಡ
ಹಾಲೆಮಜಲು ಮನೆ, ನಾಲ್ಕೂರು ಗ್ರಾಮ
ನಡುಗಲ್ಲು ಅಂಚೆ, ಸುಳ್ಯ, ದ.ಕ
ಮೊ.ನಂ 9448981963
08257-282179

## ಹಿಂಗಾರಕೆ ನೀವೂ ಬರೆನಿ

ಹಿಂಗಾರ ತ್ರೈಮಾಸಿಕ ಪತ್ರಿಕೆಗೆ ನೀವು ಕತೆ, ಪದ್ಯ, ಲೇಖನ, ಅಡುಗೆ, ರಂಗೋಲಿ, ಅನುಭವ, ಗಾದೆ, ಪದಕೋಶ ಇಂತದರೆಲ್ಲ ಬರ್ದ್ ಕಳ್ಸಿ. ಪ್ರಕಟಣೆಗೆ ಆಯ್ಕೆ ಆದ ಸಾಹಿತ್ಯನ ಪ್ರಕಟಿಸಿವೆ. ಹೊಸದಾಗಿ ಬರೆವು ಬರ್ದರ ಒಮ್ಮೆ, ಇಮ್ಮೆ, ಮತ್ತೊಮ್ಮೆ ಓದಿ ತಿದ್ದಿ ಬರೆನಿ. ಮನ್ಸಿಗೆ 'ಈಗ ಸರಿ ಆತ್'ತ ಆದ ಮೇಲೆ ಫುಲ್‌ಸ್ಕೇಪ್ ಹಾಳೆಲಿ 4 ಪುಟಕ್ಕೆ ಮೀರದಂಗೆ ಒಂದೇ ಕಡೆ ಬರೆನಿ. ಮಾರ್ಜಿನ್ ಬುಟ್ಟ್ ಬರೆನಿ. ಬರವಣಿಗೆ ನಿಮ್ಮ ಸೊಂತದ್ದಾಗಿರ್‌ಲಿ. ಅದೇ ಹಾಳೆಲಿ ನಿಮ್ಮ ಪೂರ್ತಿ ಹೆಸ್ರ್, ವಿಳಾಸ, ದೂರವಾಣಿ ಸಂಖ್ಯೆನ ಕಡ್ಡಾಯ ಆಗಿ ಬರೆನಿ.

ಹಿಂಗಾರದ ವಿಳಾಸ : **ಸಂಪಾದಕರ್**
ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ – 571 201
ಕೊಡಗು ಜಿಲ್ಲೆ
ಇ-ಮೇಲ್ : arebaseacademy@gamil.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 223055

# ಲೇಖಕರ ಹೆಸ್ರ್ ಮತ್ತೆ ವಿಳಾಸ

| | |
|---|---|
| 1. ಮಾವಜಿ ರಾಮಣ್ಣ ಅಚ್ಯುತ | ಎಂ.ಆರ್. ಅಚ್ಯುತ "ಶಿಲ್ಪಕುಟಿ", 606, 7ನೇ ಮೈನ್, 3ನೇ ಬ್ಲಾಕ್, 3ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು – 560 079. ಮೊ: 9845553206. |
| 2. ಪಿ. ಜಿ. ಅಂಬೆಕಲ್ಲ್ | ವಿಶ್ವಾಸ್ ಡ್ಯಾಪೊಡಿಲ್ಸ್,#ಮನೆ ಸಂಖ್ಯೆ–203, ರಾಮಚಂದ್ರಪುರ, ಜಾಲಹಳ್ಳಿ ಅಂಚೆ, ಬೆಂಗಳೂರು ಮೊ : 9481390089. |
| 3. ಎಂ. ಜಿ. ಕಾವೇರಮ್ಮ | "ನಿಸರ್ಗ" ಮಾವಜಿ, ಸುಳ್ಯ, ದ.ಕ. |
| 4. ಕಡ್ಯದ ಪಾರ್ವತಿ ಕೃಷ್ಣಪ್ಪ | ಅವಂದೂರು, ಮಡಿಕೇರಿ ತಾಲೂಕು. |
| 5. ಕಟ್ರತನ ಲಲಿತಾ ಅಯ್ಯಣ್ಣ | ಗೌಳಿಬೀದಿ, ಮಡಿಕೇರಿ. |
| 6. ಅಂಬೆಕಲ್ಲು ಸುಶೀಲ ಕುಶಾಲಪ್ಪ | ವಿನೋದ್ ಮೆಡಿಕಲ್ಸ್, ಮಡಿಕೇರಿ – ಕೊಡಗು. ಮೊ : 8660647118 |
| 7. ಎ.ಕೆ ಹಿಮಕರ | ಗುತ್ತಿಗಾರ್ ಅಂಚೆ ಮತ್ತು ಗ್ರಾಮ, ಸುಳ್ಯ ತಾಲೂಕು, ದ.ಕ ಜಿಲ್ಲೆ – 574218. ಮೊ : 9481267121 |
| 8. ಶೀಲಾ ಸೀತಾರಾಂ | W/o ಸೀತಾರಾಮಗೌಡ, ಸ್ವಂದನ, 3ನೇ ವಾರ್ಡ್, 238/2, ಬ್ರಾಹ್ಮಣರ ಹಾಸ್ಟಲ್ ಹತ್ತಿರ, ಜೆ.ಸಿ. ರೋಡ್, ಸುಳ್ಯ. |
| 9. ಸಂಧ್ಯಾ ವಿನಯಕುಮಾರ್ | ಮಾಣಿಕಲ್ಲು ಮನೆ, ಚೆಂಬು. |
| 10. 'ಮಾಲಗೌ' | ಎಂ. ಲಕ್ಷ್ಮಣಗೌಡ ಮಾಯಿಪನ ಮನೆ, ಮಡಪ್ಪಾಡಿ ಗ್ರಾಮ, ಮಡಪ್ಪಾಡಿ ಅಂಚೆ, ಸುಳ್ಯ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ. |
| 11. ಕೊಟ್ಟಕೇರಿಯನ ಲೀಲಾ ದಯಾನಂದ | ಮಡಿಕೇರಿ. ಮೊ : 9449858586. |
| 12. ಚಂದ್ರಮತಿ ಮುಕುಂದ | ಕುಂಬಳಚೇರಿ ಮನೆ, ಪೆರಾಜೆ ಗ್ರಾಮ ಮತ್ತು ಅಂಚೆ, ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ. |
| 13. ದಿವ್ಯ ಜಯಪ್ರಕಾಶ್ | ಬಳ್ಳಡ್ಕ, ಉಬರಡ್ಕ ಮಿತ್ತೂರು ಅಂಚೆ, ಸುಳ್ಯ ತಾಲೂಕು. ಮೊ : 9449368698 |
| 14. ವಿನೋದ್ ಮೂಡಗದ್ದೆ | ತಿತಿಮತಿ, ವಿರಾಜಪೇಟೆ ತಾಲೂಕು, ಕೊಡಗು. ಮೊ: 9535615759. |
| 15. 'ವ್ಯಾಸ' | ಮೊ : 8762121694 |
| 16. ಎಂ. ವಿ. ಮೋಹನ್ ಕುಮಾರ್ | ಭದ್ರಗೋಳ ಅಂಚೆ ಮತ್ತು ಗ್ರಾಮ, ತಾರಿಕಟ್ಟೆ, ತಿತಿಮತಿ. |
| 17. ಸೆಟ್ಟೆಜನ ಗೀತ ಪದ್ಮನಾಭ | ಬಿ. ಬಾಡಗ ಗ್ರಾಮ, ಚೇರಂಬಾಣೆ ಅಂಚೆ, ಮಡಿಕೇರಿ ತಾಲೂಕು. ಮೊ : 9483332783. |
| 18. ಮುಕ್ಕಾಟೀರ ವೇದಾ ದಯಾನಂದ | ಪಾಕ, ಚೇರಂಬಾಣೆ. |
| 19. ಲೀಲಾ ದಾಮೋದರ | ಕುಂದಲ್ಪಾಡಿ, ಚೆಂಬು. |
| 20 ಕೆ. ಕೆ. ಬೆಳ್ಳಿಯಪ್ಪ | ನಿವೃತ್ತ ಶಿಕ್ಷಕ. ಬಲಮುರಿ ಗ್ರಾಮ, ಮಡಿಕೇರಿ ತಾಲೂಕು, ಕೊಡಗು. ಮೊ : 8197063328. |
| 21. ಬೈತಡ್ಕ ಜಾನಕಿ ಬೆಳ್ಯಪ್ಪ | 21–16 ರೇಸ್‌ಕೋರ್ಸ್ ರಸ್ತೆ, ಎಲ್.ಐ.ಸಿ. ಕಚೇರಿ ಹತ್ತಿರ, ಮಡಿಕೇರಿ ತಾಲೂಕು, ಕೊಡಗು. ಮೊ : 9008571899. |
| 22. ಕಾಳಿಯಂಡ ತಂಗಮ್ಮ ಅಪ್ಪಚ್ಚ | ಬಿಳಿಗೇರಿ ಗ್ರಾಮ, ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ. |
| 23. ಬಿ. ಯಶೋದ ರಾಘವ | ಬಾಳಿಕಲ, ದೇವಿಕೃಪಾ, ಸುಳ್ಯ. |
| 24. ತುಳಸಿ ದಯಪ್ರಸಾದ್ | ಚೀಮುಳ್ಳು ವನಸಿರಿ, ಚೀಮುಳ್ಳು ಮನೆ, ಪಂಬೆತ್ತಾಡಿ ಗ್ರಾಮ, ಪಂಜ. ಮೊ : 9980879995, 8277208810. |
| 25. ಎಂ. ಸಿ. ಗೀತಾ | ಜನಪ್ರಿಯ ಹೈಟ್ಸ್ ನಂ. 1205, 2ನೇ ಮಹಡಿ, ಮಲ್ಲಸಂದ್ರ, ಬೆಂಗಳೂರು – 73 ಮೊ : 7338687687. |

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಮಡಿಕೇರಿ

ವತಿಂದ

ಕರ್ನಾಟಕ ಸರಕಾರ

ಅರೆಭಾಸೆ ಸಾಂಸ್ಕೃತಿಕ ಕಲಾ ಸಂಘ, ಕೊಲ್ಲಮೊಗ್ರ

ಸಹಕಾರದೊಂದಿಗೆ

# ಅಕಾಡೆಮಿ ಪ್ರಕಟಿತ ಅರೆಬಾಸೆ ಪುಸ್ತಕಗಳ ಬಿಡ್‌ಗಡೆ
# ಅರೆಬಾಸೆ ಗೌಜಿ ಮತ್ತೆ ಸಾಂಸ್ಕೃತಿಕ ವೈಭವ

ತಾರೀಕ್ : 20.01.2019 ಅಯ್ತುವಾರ  ಸಮಯ : ಬೊಳ್ಪಿಗೆ 10 ಗಂಟೆಂದ

ಜಾಗೆ : ಶ್ರೀ ಮಯೂರ ಕಲಾಮಂದಿರ ಕೊಲ್ಲಮೊಗ್ರ

## ಉದ್ಘಾಟನೆ ಕಾರ್ಯಕ್ರಮ

ಉದ್ಘಾಟಕರ್ : ಶ್ರೀ ಉಮೇಶ್ ಬಿಳಿಮಲೆ, ಸಾಹಿತಿಗ

ಅಧ್ಯಕ್ಷತೆ : ಶ್ರೀ ಪಿ ಸಿ ಜಯರಾಮ,
ಅಧ್ಯಕ್ಷರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಪುಸ್ತಕ ಬಿಡುಗಡೆ : ಶ್ರೀ ಕೆ. ಗೋಪಾಲಕೃಷ್ಣ ಗೌಡ,
ಕಣ್ಕಲ್, ಅಬಕಾರಿ ಸಹಾಯಕ ಆಯುಕ್ತರ್, ಹಾಸನ ಜಿಲ್ಲೆ,

ಬಿಡ್‌ಗಡೆ ಮಾಡ್‌ವ ಕೃತಿಗ : 'ಕಾಡ್‌ನ ಮಕ್ಕ' (ಶ್ರೀ ಕೆ.ಆರ್. ತೇಜಕುಮಾರ್ ಬಡ್ಡಡ್ಕ)
'ಬೊದ್ಕ್' (ಶ್ರೀಮತಿ ಎಂ.ಜಿ. ಕಾವೇರಮ್ಮ ಸುಳ್ಯ)
'ನೆನ್ಪುನ ಜೊಂಪೆ' (ಕು. ವಿನೋದ್ ಮೂಡಗದ್ದೆ)
'ಹಿಂಗಾರ' 8ನೇ ಆವೃತ್ತಿ

ಪುಸ್ತಕ ಬಹುಮಾನ ಯೋಜನೆ : 'ತಿಂಗೊಳ್ ಬೆಳ್‌ಕ್' (ಶ್ರೀ ಯೋಗೀಶ ಹೊಸೊಳಿಕೆ)
'ಒಟ್ಟಿಗೆ ಒಳ' (ಶ್ರೀ ಸುಧೀರ್ ಏನೆಕಲ್)

ಕೃತಿ ಪರಿಚಯ : ಶ್ರೀ ಎ.ಕೆ ಹಿಮಕರ
ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಮುಖ್ಯ ನೆಂಟ್ರ್ : ಶ್ರೀಮತಿ ವೀಣಾನಂದ ಬಿಳಿಮಲೆ, ಅಧ್ಯಕ್ಷರ್, ಗ್ರಾಮ ಪಂಚಾಯತ್ ಕೊಲ್ಲಮೊಗ್ರ
ಶ್ರೀ ಉದಯ ಕೊಪ್ಪಡ್ಕ, ಸದಸ್ಯರ್, ತಾಲೂಕು ಪಂಚಾಯತ್, ಸುಳ್ಯ
ಶ್ರೀ ಶಿವರಾಮ ಗೌಡ ಕುಂಞಟ್ಟಿ,
ಮಾಜಿ ಸದಸ್ಯರ್, ಕರ್ನಾಟಕ ಅರೆಬಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಶ್ರೀಮತಿ ಲಲಿತಾಜ ಮಲ್ಲಾರ, ಸಾಹಿತಿಗ
ಶ್ರೀ ದೇವಜನ ಹರ್ಷಕುಮಾರ್, ಅಧ್ಯಕ್ಷರ್ ಕೊಲ್ಲಮೊಗ್ರ-ಹರಿಹರ ವ್ಯ.ಸೇ.ಸ. ಸಂಘ
ಶ್ರೀ ಮೋಹನ ಗೌಡ ಮಡ್ತಿಲ, ನಿವೃತ್ತ ಕೆಲಸ ನಿರೀಕ್ಷಕರು, ಪಿ.ಡಬ್ಲ್ಯೂಡಿ
ಶ್ರೀ ಗಣಪತಿ ಗೌಡ, ನಿವೃತ್ತ ಶಿಕ್ಷಕರು,

**ಅರೆಬಾಸೆ ಸಾಂಸ್ಕೃತಿಕ ಸ್ಪರ್ಧೆಗ** ಸಮಯ 11.30 ರ್‌ಂದ

**ಊಟದ ವಿರಾಮ** 1-00 ಗಂಟೆಯಿಂದ 2-00 ಗಂಟೆಯವರೆಗೆ

## ಸಾಧಕರಿಗೆ ಸನ್ಮಾನ ಮತ್ತೆ ಸಮಾರೋಪ ಸಮಾರಂಭ

ಸಮಯ 2.30 ರ್‌ಂದ

ಅಧ್ಯಕ್ಷತೆ : **ಶ್ರೀ ಪಿ.ಸಿ ಜಯರಾಮ**
ಅಧ್ಯಕ್ಷರ್ ,ಕರ್ನಾಟಕ ಅರೆಬಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಮುಕ್ತಾಯದ ಮಾತ್: **ಶ್ರೀ ಹೊದ್ದೆಟ್ಟಿ ಭವಾನಿಶಂಕರ,** ಅರೆಬಾಸೆನ ಆದಿ ಕವಿ, ಬೆಂಗಳೂರು

ಮುಖ್ಯ ನೆಂಟ್ರ್ : **ಶ್ರೀಮತಿ ಆಶಾ ತಿಮ್ಮಪ್ಪ,**
ಸದಸ್ಯರ್, ಜಿಲ್ಲಾ ಪಂಚಾಯತ್, ಮಂಗಳೂರು
**ಶ್ರೀ ಬಿ.ಸಿ ವಸಂತ,** ಮಾಜಿ ಸದಸ್ಯರ್,
ಕರ್ನಾಟಕ ಅರೆಬಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
**ಶ್ರೀ ದಿನೇಶ್ ಮಡಪ್ಪಾಡಿ**
ಪೂರ್ವಾಧ್ಯಕ್ಷರ್, ಗೌಡರ ಯುವ ಸೇವಾ ಸಂಘ ಸುಳ್ಯ
**ಶ್ರೀ ಶ್ರೀನಿವಾಸ ಗೌಡ**
ವಲಯ ಮೇಲುಸ್ತುವಾರಿ, ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ ಗುತ್ತಿಗಾರು ವಲಯ
**ಶ್ರೀ ಸತೀಶ್ ಕೂಜುಗೊಡು** ಅಧ್ಯಕ್ಷರ್, ಜೀರ್ಣೋಧ್ಧಾರ ಸಮಿತಿ
ಶ್ರೀ ಹರಿಹರೇಶ್ವರ ದೇವಸ್ಥಾನ, ಹರಿಹರ ಪಲ್ಲತಡ್ಕ
**ಶ್ರೀ ಕೆ.ಪಿ ಗಿರಿಧರ,** ಮಾಜಿ ಅಧ್ಯಕ್ಷರ್, ಗ್ರಾಮ ಪಂಚಾಯತ್ ಕೊಲ್ಲಮೊಗ್ರ

ಸನ್ಮಾನಿತರ್ : **ಶ್ರೀ ಪಟೇಲ್ ನಾಗಪ್ಪಗೌಡ** (ನಿವೃತ್ತ ಹಿರಿಯ ಯೋಧ)
**ಡಾ.ಚಂದ್ರಶೇಖರ ಕಿರಿಭಾಗ** (ಆರೋಗ್ಯ ಸೇವೆ)
**ಶ್ರೀ ಶಿವರಾಜ್ ಕಟ್ಟ** (ಸಮಾಜ ಸೇವೆ)
**ಶ್ರೀ ಹಮೀದ್‌ಇಡ್ನೂರು** (ಸಮಾಜ ಸೇವೆ)
**ಶ್ರೀ ಉಮೇಶ್‌ಆಚಾರ್ಯ** (ಊರುಕಟ್ಟ್‌ನ ಸೇವೆ)
**ಶ್ರೀ ಕೃಷ್ಣ ಬೆಳ್ಳಪಾಡ** (ಸಂಸ್ಕೃತಿ ಸೇವೆ)
**ಶ್ರೀ ಬೊಳಿಯ ಅಜಲ** (ಸಂಸ್ಕೃತಿ ಸೇವೆ)
**ಶ್ರೀ ಮಣಿಕಂಠಕಟ್ಟ** (ಊರ್‌ಕಟ್ಟ್‌ನ ಸೇವೆ)
**ಶ್ರೀ ಸುರೇಶ್ ಚಾಳೆಪ್ಪಾಡಿ** (ಊರುಕಟ್ಟ್‌ನ ಸೇವೆ)
**ಶ್ರೀಮತಿ ಮುತ್ತಮ್ಮ ಕುಚ್ಚಾಲ** (ಪೆದ್ದೊಳ್ತಿ ಕೂಸುನ ಆರೈಕೆ)
**ಶ್ರೀ ರಾಜಣ್ಣ ನೆಲ್ಲಿಪುಣಿ** (ಧಾರ್ಮಿಕ)
**ಶ್ರೀ ಹರ್ಷಕೋನಡ್ಕ** (ಶ್ರಮಜೀವಿ)
**ಶ್ರೀಮತಿ ಕಾತ್ಯಾಯಿನಿ** (ಸಂಸ್ಕೃತಿ ಸೇವೆ)

HINGARA Arebhashe Quarterly Volume -2, Issue -8
Date: 31.12.2018 Kodagu KARARB/2016/69571 Price : 20/- Pages : 92



15-12-2018 ರಂಡ್ ಮಡಿಕೇರಿಲಿ ನಡ್ದ ಅಕಾಡೆಮಿಯ 7ನೇ ವಾರ್ಷಿಕೋತ್ಸವ
ಮತ್ತೆ ಭಾಷಾ ಸೌಹಾರ್ದ ಜಂಬರದ ಉದ್ಘಾಟನೆ



15-12-2018 ರಂಡ್ ಮಡಿಕೇರಿಲಿ ನಡ್ದ ಅಕಾಡೆಮಿಯ 7ನೇ ವಾರ್ಷಿಕೋತ್ಸವ
ಮತ್ತೆ ಭಾಷಾ ಸೌಹಾರ್ದ ಜಂಬರಲಿ ಅಭಿಪ್ರಾಯ ಕೊಡ್ತಿರುವ ಸಭಿಕರ್

rinted by CHANDRA HASA RAI B. on behalf of Registar, Karnataka Arebhase Samskruthi Mathu Sahitya Academy, nd, Published by CHANDRA HASA RAI B. on behalf of registar of registar Karnataka Arebhashe Samskruthi Mathu Sahitya Acadamy on behalf of KARNATAKA AREBHASE SAMSKRUTHI MATHU SAHITHYA ACADEMI (name of woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhashe Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : CHANDRA HASA RAI B.

Ptd @ Sri Krishna Printers, Mdk. Mob : 94481 35592